# ಸಿದ್ಧಗಂಗಾ

ತ್ರೈಮಾಸಿಕ

## ಸಂಕ್ರಮಣ ಸಂಚಿಕೆ

೧೯೬೫



## ಸಿದ್ಧಗಂಗಾ

ಸಂಪಾದಕರು :
**ಸಂ|ವಿ|ಟ.ವಿ.ಮುತ್ತಾಚಾರ್ಯ, ಬಿ.ಎ.(ಆನರ್ಸ್)ಬಿ.ಇಡಿ.**

ಸಹಾಯ ಸಂಪಾದಕರು :
**ಪಂಡಿತ್ ಎಂ.ನಂಜುಂಡಯ್ಯ**
**ಪಂಡಿತ್ ಕೆ.ಪಿ.ಶಿವಲಿಂಗಯ್ಯ**
**ಶ್ರೀ ಶಿವಾನಂದಮೂರ್ತಿ,** ಬಿ.ಎಸ್‌ಸಿ.
**ಶ್ರೀ ಕೆ.ಸೂರ್ಯನಾರಾಯಣರಾವ್,** ಬಿ.ಎಸ್‌ಸಿ.,ಎಂ.ಇಡಿ.

ಪ್ರಕಾಶಕರು :
**ಹಳೆಯ ವಿದ್ಯಾರ್ಥಿ ಸಂಘ, ಶ್ರೀ ಸಿದ್ಧಗಂಗಾ**

ಮುದ್ರಕರು :
**ಜನತಾ ಮುದ್ರಣಾಲಯ, ತುಮಕೂರು**

ಪತ್ರಿಕೆ ಹೊರಡುವ ಸ್ಥಳ :
**ಶ್ರೀ ಸಿದ್ಧಗಂಗಾ ಕ್ಷೇತ್ರ**

ಪತ್ರಿಕೆ ಹೊರಡುವ ಮಾಸಗಳು :
**ಜನವರಿ**
**ಏಪ್ರಿಲ್**
**ಜುಲೈ**
**ಅಕ್ಟೋಬರ್**


---

### ಲೇಖಕರಲ್ಲಿ ವಿನಂತಿ

"ಸಿದ್ಧಗಂಗಾ" ಪತ್ರಿಕೆಗೆ ಮಾನ್ಯ ಲೇಖಕರಿಂದ ಸಾಹಿತ್ಯದ ವಿವಿಧ ಪ್ರಾಕಾರಗಳ ಲೇಖನಗಳನ್ನು ಕೃತಜ್ಞತಾಪೂರ್ವಕವಾಗಿ ಸ್ವೀಕರಿಸಲಾಗುವುದು. ತಮ್ಮ ಹೆಸರು ವಿಳಾಸಗಳ ಸಹಿತ ಕಾಗದದ ಒಂದೇ ಮಗ್ಗುಲಲ್ಲಿ ಲೇಖನಗಳನ್ನು ಸ್ಪಷ್ಟವಾಗಿ ಬರೆದು ಕಳುಹಿಸಲು ಪ್ರಾರ್ಥನೆ. ಧರ್ಮ, ಸಂಸ್ಕೃತಿ, ಕಲೆ, ಸಾಹಿತ್ಯ, ವಿಜ್ಞಾನ, ಶಿಕ್ಷಣ ಮುಂತಾದ ವಿಚಾರಗಳನ್ನೊಳಗೊಂಡ ಲೇಖನಗಳಿಗೆ ಮಾನ್ಯತೆ ಹೆಚ್ಚು. ಲೇಖಕರು ತಮ್ಮ ಲೇಖನದ ಪ್ರತಿಯನ್ನು ಕಾಯ್ದಿಟ್ಟುಕೊಳ್ಳಲು ಪ್ರಾರ್ಥನೆ. ಲೇಖನಗಳನ್ನೂ, ವಿಮರ್ಶೆಗೆ ಗ್ರಂಥಗಳನ್ನೂ, ವಿನಿಮಯಕ್ಕೆ ಪತ್ರಿಕೆಗಳನ್ನೂ ಸಂಪಾದಕರ ವಿಳಾಸಕ್ಕೆ ದಯವಿಟ್ಟು ಕಳುಹಿಸಬೇಕು.



# ದೀಪ

ನೀನೇ ಹಚ್ಚಿದ ದೀಪ
ಬೆಳಗುತ್ತಿದೆ ಇಲ್ಲಿ
ನಾನೀ ದೀಪದ ಕಂಬ
ನಿನ್ನಯ ಬಳಿಯಲ್ಲಿ

ನಿನ್ನೊಲವಿನ ರಸತೈಲದ
ಕುಡಿ ದೀಪದ ಬಳ್ಳಿ
ಬಾಳಿನ ರಸ ಭಾವೋನ್ನತಿ-
ಯನು ತೋರುವುದಿಲ್ಲಿ

ನೀ ವಾಸಿಸುವೀ ದೇಗುಲ-
ಕಿನ್ನೆಲ್ಲಿದೆ ಶಮವು
ಆನಂದದ ಗುಡಿಯಾಗಲಿ
ಇನ್ನೆನ್ನಯ ಮನವು

—ತಾ.ವೆಂ.ಮು.

# 'ಸಿದ್ಧಗಂಗಾ'ಕ್ಕೆ ಸಾಹಿತಿಗಳ ಸಂದೇಶ

○○

ಪ್ರಿಯರೇ,

"......ಸಿದ್ಧಗಂಗಾ ಕ್ಷೇತ್ರದಲ್ಲಿ ಒಂದು ತ್ರೈಮಾಸಿಕ ಮೂಡಿ ಬರುವುದನ್ನು ತಿಳಿದು ಸಂತೋಷ ವಾಯಿತು. ಅದು ಕನ್ನಡನಾಡಿನಲ್ಲಿ ಉನ್ನತವಿಚಾರ ಆಚಾರಗಳನ್ನು ಬೋಧಿಸುವ ಮತ್ತು ಕನ್ನಡ ಸಂಸ್ಕೃತಿಯ ಸಾರಾಯವನ್ನು ಎತ್ತಿಹಿಡಿಯುವ ಪತ್ರಿಕೆಯಾಗಲಿ ಎಂದು ಹಾರೈಸುತ್ತೇನೆ".

–ಡಾ॥ರಂ.ಶ್ರೀ. ಮುಗಳಿಯವರು.

"......ತಾವು ಒಂದು ಪತ್ರಿಕೆಯನ್ನು ಆರಂಭಿಸಲು ಉದ್ದೇಶಿಸಿರುವುದು ಸಂತೋಷ. ಪೂಜ್ಯ ಸ್ವಾಮಿಗಳ ಅನುಗ್ರಹದಿಂದ ಕೈಗೊಂಡಿರುವ ಈ ಕೆಲಸ ಚೆನ್ನಾಗಿಯೇ ನಡೆಯುತ್ತದೆ, ಸಂದೇಹವಿಲ್ಲ. ಮಾಡಿರಿ. ಬಹಳ ಒಳ್ಳೆಯದು".

–ಡಾ॥ಮಾಸ್ತಿ ವೆಂಕಟೇಶ ಐಯ್ಯಂಗಾರ್ಯರು.
"ಜೀವನ" ಸಂಪಾದಕರು.

"ತಾವು ಶ್ರೀ ಶ್ರೀಯವರ ಉಪದೇಶಗಳನ್ನು ಒಳಗೊಂಡಿರುವ "ಸಿದ್ಧಗಂಗಾ" ಪತ್ರಿಕೆಯನ್ನು ಹೊರಡಿಸುತ್ತಿರುವ ಏರ್ಪಾಡು ತುಂಬಾ ಪ್ರಶಂಸನೀಯವಾಗಿದೆ".

"ಭಗವಂತನನ್ನು ಜ್ಞಾನಾನಂದ ಸ್ವರೂಪನೆಂದು ಹಿರಿಯರು ಹೇಳುತ್ತಾರೆ. ಜ್ಞಾನವೂ ಆನಂದವೂ ಇಲ್ಲದ ಕಡೆ ಆತ ಅಂತರ್ಹಿತನಾಗಿದ್ದಾನೆ. ಆದಷ್ಟು ಮಟ್ಟಿಗೆ ಇವುಗಳನ್ನು ಪ್ರಕಾಶಗೊಳಿಸುವ ಮಹನೀಯರೆಲ್ಲರೂ ಭಗವತ್ ಪ್ರಕಾಶನದಲ್ಲಿ ಉದ್ಯುಕ್ತರಾಗಿರುವುದರಿಂದ ವಂದ್ಯರೇ ಸರಿ. ನಿಮ್ಮ ಪತ್ರಿಕೆಗೆ ಇವುಗಳನ್ನು ಪ್ರಸರಿಸಬಲ್ಲ ತಕ್ಕ ಮನಸ್ಸು ಮಾತುಗಳೂ ಯಥೇಚ್ಛವಾಗಿ ದೊರೆಯಲೆಂದು ಹಾರೈಸುತ್ತೇನೆ".

–ಶ್ರೀ ಪು.ತಿ. ನರಸಿಂಹಾಚಾರ್‌ರವರು.

ಸಂಪುಟ ೧ ೧೪—೧—೧೯೬೫ ಸಂಚಿಕೆ ೧

# ಈ ಸಂಚಿಕೆಯಲ್ಲಿ

---

## ಚಂದಾ ವಿವರ

ಬಿಡಿ ಪ್ರತಿ : ರೂ. ೧-೨೫

| | | | | |
|---|---|---|---|---|
| ವಾರ್ಷಿಕ ಚಂದಾ | ಸಂಸ್ಥೆಗಳಿಗೆ | 6 | 00 | ಅಂಚೆ ವೆಚ್ಚ ಸೇರಿ |
| ,, ,, | ವ್ಯಕ್ತಿಗಳಿಗೆ | 5 | 00 | ,, |
| ,, ,, | ವಿದ್ಯಾರ್ಥಿಗಳಿಗೆ | 4 | 00 | ,, |

ಚಂದಾ ಹಣವನ್ನು :

"ಕಾರ್ಯದರ್ಶಿ" : ಹಳೆಯ ವಿದ್ಯಾರ್ಥಿ ಸಂಘ,
ಶ್ರೀ ಸಿದ್ಧಗಂಗಾ ಕ್ಷೇತ್ರ, ತುಮಕೂರು ಜಿಲ್ಲೆ
ಇವರಿಗೆ ಕಳುಹಿಸಬೇಕು.

ಪ್ರಕಟನೆಗೆ ಲೇಖನಗಳನ್ನೂ, ವಿಮರ್ಶೆಗೆ ಗ್ರಂಥಗಳನ್ನೂ ವಿನಿಮಯಕ್ಕೆ ಪತ್ರಿಕೆಗಳನ್ನೂ :

"ಸಂಪಾದಕ", "ಸಿದ್ಧಗಂಗಾ" (ತ್ರೈಮಾಸಿಕ)
"ನಾದ ವಿಹಾರ", ಸೋಮೇಶ್ವರಪುರ ವಿಸ್ತರಣೆ, **ತುಮಕೂರು**
ಇವರಿಗೆ ಕಳುಹಿಸಬೇಕು.



ಪತ್ರಿಕೆಯ ಮಹಾಪ್ರೋಷಕರೂ ಮತ್ತು ಅಧ್ಯಕ್ಷರೂ ಆದ ಶ್ರೀಮನ್ನಿರಂಜನಪ್ರಣವಸ್ವರೂಪಿ ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರು



# ನಿವೇದನೆ

ಮೊದಲಬಾರಿಗೆ ಶ್ರೀ ಸಿದ್ಧಗಂಗಾ ಕ್ಷೇತ್ರದಿಂದ ಇದೀಗ "ಸಿದ್ಧಗಂಗಾ" ತ್ರೈಮಾಸಿಕ ಪ್ರಕಟವಾಗುತ್ತಿರುವುದು ನಮಗೆ ಅತ್ಯಂತ ಸಂತಸದ ಸಂಗತಿ. ಕ್ಷೇತ್ರದ ಹಳೆಯ ವಿದ್ಯಾರ್ಥಿಗಳ ಸಂಘದ ಬಹುದಿನಗಳ ಈ ಕನಸು ಶ್ರೀಗಳವರ ಅನುಗ್ರಹಬಲದಿಂದ ನನಸಾದುದು ನಿಜವಾಗಿಯೂ ನಮಗೆ ಹೆಮ್ಮೆಯೇ ಸರಿ. ಅಂತೆಯೇ ಈ ಪತ್ರಿಕೆಯ ಪ್ರಕಾಶನದ ಕಾರ್ಯವನ್ನು ಈ ಸಂಘ ಹೆಮ್ಮೆಯಿಂದ ವಹಿಸಿಕೊಂಡಿದೆ.

ಇಂತಹ ಸುಂದರ ಸಂಚಿಕೆಯನ್ನು ಪ್ರಕಟಿಸಲು ದೃಢನಿರ್ಧಾರಮಾಡಿ ಕೇವಲ ಮೂರು ತಿಂಗಳಾಯಿತು. ಇಷ್ಟು ಅಲ್ಪಾವಧಿಯಲ್ಲಿ ಲೇಖಕರಿಂದ ನಮಗೆ ದೊರೆತ ಸಹಕಾರ ಚಿರಸ್ಮರಣೀಯ. ಈ ಕಾರ್ಯ ಪ್ರಾರಂಭವಾದಾಗ ನಮಗೆ ಇದಕ್ಕಾಗಿ ಯಾವ ಮೀಸಲು ಹಣವೂ ಇರಲಿಲ್ಲ. ಶ್ರದ್ಧೆ-ಆಸಕ್ತಿ-ಸೇವಾ ಮನೋಭಾವ ಇವೇ ನಮ್ಮ ದೊಡ್ಡ ಆಸ್ತಿಯಾಗಿದ್ದವು. ನಮ್ಮ ಸಂಘದ ಅಭಿಮಾನಿಗಳೂ, ಭಕ್ತಾದಿಗಳೂ ನಮಗೆ ತಮ್ಮ ಉದಾರ ಹಸ್ತವನ್ನು ನೀಡಿ ಹುರಿದುಂಬಿಸಿ ಈ ಕಾರ್ಯಕ್ಕೆ ಪ್ರೋತ್ಸಾಹ ನೀಡಿರುವುದು ನಮಗೆ ತುಂಬಾ ಹುರುಪುಕೊಟ್ಟಿದೆ.

ಈ ಸಂಚಿಕೆಗೆ ಲೇಖಕರು ತಮ್ಮ ಲೇಖನಗಳಿಂದ ಜೀವ ತುಂಬಿದ್ದಾರೆ. ಇವರಲ್ಲಿ ಅನೇಕರು ಸಾಹಿತ್ಯದ ವಿವಿಧ ಪ್ರಾಕಾರಗಳಲ್ಲಿ ಹೆಸರಾಂತವರಾಗಿದ್ದಾರೆ. ಹಲವರು ಉತ್ತಮ ಗ್ರಂಥಗಳನ್ನೂ ಪ್ರಕಟಿಸಿದ್ದಾರೆ. ಪಾಂಡಿತ್ಯ ಪೂರ್ಣವಾದ ಲೇಖನಗಳೂ, ಸಂಶೋಧನಾತ್ಮಕವಾದ ಬರೆಹಗಳೂ, ಕಥೆ, ಕವನ, ಕ್ಷೇತ್ರ ಪರಿಚಯ ಮುಂತಾದವುಗಳೂ ಈ ಸಂಚಿಕೆಯನ್ನು ಅಲಂಕಾರಗೊಳಿಸಿವೆ. ನಮ್ಮ ನಾಡಿನ ಸಾಹಿತ್ಯ ಹಾಗೂ ಜನಜೀವನದ ವಿರಾಟ್ ಸ್ವರೂಪದ ಒಂದೆರಡಂಶಗಳಾದರೂ ಇಲ್ಲಿವೆಯೆಂಬುದನ್ನು ನೆಚ್ಚಿನ ಓದುಗರು ಮನಗಾಣದಿರರು. ಆದರೂ ಪ್ರಾರಂಭದ ಸಂಚಿಕೆಯಲ್ಲಿ ಹಲಕೆಲವು ಲೋಪದೋಷಗಳಾಗುವುದು ಅನಿವಾರ್ಯವೆಂದು ನಮ್ರತೆಯಿಂದ ಬಿನ್ನವಿಸುತ್ತೇವೆ. ಉತ್ತಮ ಮಟ್ಟಕ್ಕೆ ನಾವಿದನ್ನು ಒಯ್ಯಬೇಕೆಂಬುದೇ ನಮ್ಮ ದೃಢ ನಿರ್ಧಾರ.

ವಿಜ್ಞಾನದ ದುರುಪಯೋಗದಿಂದಾಗಿ ಲೋಕದಲ್ಲಿ ಹರಡುತ್ತಿರುವ ಧರ್ಮತಾತ್ಸಾರದ ಮಹಾ ರೋಗವನ್ನು ತಡೆಗಟ್ಟಲು ಪ್ರತಿಯೊಬ್ಬ ಭಾರತೀಯನೂ ಬದ್ಧಕಂಕಣನಾಗಬೇಕಾದ ಕಾಲ ಇದೀಗ ಸನ್ನಿಹಿತವಾಗಿದೆ. ಲೋಕ ಕಲ್ಯಾಣ, ಲೋಕ ಶಾಂತಿ, ಲೋಕ ಸುಭಿಕ್ಷತೆಗಳಿಗಾಗಿ ಸರ್ವದಾ ಶ್ರಮಿಸುತ್ತಿರುವ ತ್ಯಾಗಧರ್ಮಗಳ ಸಾಕಾರಮೂರ್ತಿಗಳಾಗಿರುವ ಶ್ರೀ ಸಿದ್ಧಗಂಗಾ ಕ್ಷೇತ್ರದೊಡೆಯರಾದ ಶ್ರೀಮನ್ನಿರಂಜನ ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರು ತಮ್ಮ ಅಮೃತವಾಣಿಗಳನ್ನು ಈ ಸಂಚಿಕೆಗಿತ್ತು ಉಪಕರಿಸಿರುವುದೂ ನಮ್ಮ ಹಾಗೂ ಲೋಕದ ಪುಣ್ಯ. ಇದಕ್ಕಾಗಿ ಶ್ರೀಗಳವರ ಚರಣಗಳಲ್ಲಿ ಹೃತ್ಪೂರ್ವಕ ಸಾಷ್ಟಾಂಗ ಸಮರ್ಪಣಗಳು. ತಮ್ಮ ಅಮೋಘ ಲೇಖನ, ಕವನ, ಕಥೆ, ಇತ್ಯಾದಿಗಳಿಂದ ಸಂಚಿಕೆಯನ್ನು ಬೆಳಗಿಸಿರುವ ಸನ್ಮಾನ್ಯ ಬರಹಗಾರರಿಗೂ ನಮ್ಮ ವಂದನೆಗಳು ಸಲ್ಲುತ್ತವೆ.

ನಮ್ಮೀ ಉದ್ಯಮದಲ್ಲಿ ಸಹಕರಿಸಿ ಸಹಾಯಮಾಡಿರುವ ಮಿತ್ರವರ್ಗದವರಿಗೂ, ಜಾಹಿರಾತುಗಳನ್ನು ಕೊಟ್ಟು ಆರ್ಥಿಕವಾಗಿ ಸಹಾಯಮಾಡಿರುವ ವಾಣಿಜ್ಯೋದ್ಯಮಿಗಳಿಗೂ ನಮ್ಮ ಅನಂತ ಕೃತಜ್ಞತೆಗಳು ಸಲ್ಲುತ್ತವೆ.

ಈ ಸಂಚಿಕೆಯನ್ನು ಶಾಂತಚಿತ್ತರಾಗಿ ಓದಿದ ಮಹನೀಯರೂ, ಮಹಿಳೆಯರೂ, ಸಂಘದ ಸದಸ್ಯರೂ ಪತ್ರಿಕೆಯ ಬಗ್ಗೆ ತಮ್ಮ ಅಭಿಪ್ರಾಯವನ್ನು ಲಿಖಿತ ಮೂಲಕ ಕಳುಹಿಸಿಕೊಟ್ಟರೆ ಸಂಘವು ಸರ್ವದಾ ಅಂತಹವರನ್ನು ಸ್ಮರಿಸುತ್ತದೆ.

ಅನೇಕ ಹಿರಿಯ ಸಾಹಿತಿಗಳು ನಮ್ಮ ಪ್ರಯತ್ನಕ್ಕೆ ಯಶಸ್ಸನ್ನು ಕೋರಿ ಸಂದೇಶವನ್ನು ಕಳುಹಿಸಿರುವುದಕ್ಕಾಗಿ ಅವರಿಗೂ ನಾವು ಋಣಿಗಳು. ಈ ಸಂಚಿಕೆಯನ್ನು ಮುದ್ರಿಸಿಕೊಟ್ಟ "ಜನತಾ" ಮುದ್ರಣಾಲಯದವರಿಗೂ ನಮ್ಮ ವಂದನೆಗಳು.

"ಉಸಿರು ಮನಸು ಹೊಟ್ಟೆ ಬಟ್ಟೆ
ಬಡತನವನು ನೀಗಲಿ
ಅಲ್ಪ ದೂರವಾಗಲಿ
ಭೂಮವೆಡೆಗೆ ಬಾಗಲಿ"

ಎಂಬ ಮಹಾಕವಿ ವಾಣಿಯು ಸಿದ್ಧಿಸಲಿ. "ಸಿದ್ಧಗಂಗಾ" ಸಾಹಿತ್ಯವು ಅಮೃತಮಯವಾಗಲಿ.

ಸಂ॥ವಿ॥ ಟಿ. ವಿ. ಮುತ್ತಾಚಾರ್ಯ
ಸಂಪಾದಕ

ಶ್ರೀ ಸಿದ್ಧಗಂಗಾ

# ಸತ್ಯ ದರ್ಶನ




ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರು

ಮಾನವನು ವಿಶ್ವದ ಅತ್ಯಂತ ಶ್ರೇಷ್ಠಜೀವಿ. ಅವನ ಚರಮ ಗುರಿ ಸತ್ಯಸಾಕ್ಷಾತ್ಕಾರ. ಅಂತೆಯೇ ಚಿರಕಾಲದಿಂದಲೂ ಸತ್ಯಾನ್ವೇಷಣೆಯ ಪ್ರಯತ್ನ ನಡೆದಿದೆ. ತಮ್ಮ ಪ್ರಯತ್ನದಲ್ಲಿ ಜಯಶೀಲರಾಗಿ ಸಿದ್ಧಿಯನ್ನು ಪಡೆದ ಮಹಾವ್ಯಕ್ತಿಗಳು ತಮ್ಮ ಸಾಕ್ಷಾತ್ಕಾರದ ನಿಲುವನ್ನು, ತಮ್ಮ ಅನುಭವದ ಅರಿವನ್ನು, ಸಾಧನೆಯ ಮಾರ್ಗವನ್ನು ಮಾನವ ಜನಾಂಗದ ಉದ್ಧಾರಕ್ಕಾಗಿ ಬಿಟ್ಟು ಹೋಗಿದ್ದಾರೆ. ಆ ಮಾರ್ಗ, ಆ ಅರಿವು, ಆ ನಿಲವು ನಮ್ಮ ಜೀವನಪಥದ ಮಾರ್ಗದರ್ಶನವಾದಾಗ ಯಾತ್ರಾರ್ಥಿಗಳಾದ ನಾವು ಗಂತವ್ಯವನ್ನು ಮುಟ್ಟಿ ಕೃತಕೃತ್ಯರಾದೇವು.

ಇದು ವಿಜ್ಞಾನಯುಗ. ವಿಜ್ಞಾನದ ಪರಮಧ್ಯೇಯವು ಸತ್ಯ ಸಾಕ್ಷಾತ್ಕಾರ. ಈ ದೃಷ್ಟಿಯಿಂದ ವಿಜ್ಞಾನವನ್ನು ಉಪಾಸಿಸುವುದೇ ನಿಜವಾದ ಸಾಧನೆ. ವಾಸ್ತವಿಕ ಧ್ಯೇಯದ ಅರಿವಿಲ್ಲದಿದ್ದರೂ ತನ್ನ ಅದ್ಭುತವಾದ ಧೀಶಕ್ತಿಯ ಪ್ರಯೋಗದಿಂದ ಅನಂತ ಸಂಶೋಧನೆಗಳನ್ನು ಮಾಡುತ್ತಿರುವ ವಿಜ್ಞಾನಿಯು ಆ ದಿಶೆಯಲ್ಲಿಯೇ ಸಾಗುತ್ತಿರುವನೆನ್ನುವುದನ್ನು ಮನಗಾಣಬಹುದು. ಹಲವಾರು ವರ್ಷಗಳ ಹಿಂದೆ Matter ಎಂಬುದು ಒಂದು ಘನೀಭೂತವಾದ ವಸ್ತುವೆಂದೂ ಉದ್ದ, ಅಗಲ, ತೂಕ ಮುಂತಾದ ಲಕ್ಷಣಗಳುಳ್ಳುದೆಂದೂ ವಿಜ್ಞಾನಿಯು ಅರ್ಥಮಾಡಿಕೊಂಡಿದ್ದನು. ಸಂಶೋಧನೆಗಳು ಮುಂದುವರಿದು ಸತ್ಯತತ್ವಗಳ ಜ್ಞಾನವು ಹೆಚ್ಚಿದಂತೆಲ್ಲಾ ಈ ತಿಳಿವಳಿಕೆ ಬದಲಾಗಿ Matter ಎನ್ನುವುದು ಶಕ್ತಿಯ ಒಂದು ರೂಪವೆಂದು ಅರ್ಥಮಾಡಿಕೊಂಡಿದ್ದಾನೆ. ಅಂತೆಯೇ ವಿಶ್ವವೆಲ್ಲವೂ ಶಕ್ತಿಮಯವೆನ್ನುವ ತತ್ವವನ್ನು ಅಂಗೀಕರಿಸಿದ್ದಾನೆ. ಈ ಶಕ್ತಿಯು ಅವ್ಯಕ್ತವಾಗಿ ಅತ್ಯಂತ ಸೂಕ್ಷ್ಮವಾಗಿರುವುದೆಂದೂ ವಿಶ್ವವೆಲ್ಲವನ್ನೂ ವ್ಯಾಪಿಸಿಕೊಂಡಿರುವುದೆಂದೂ ಅರ್ಥಮಾಡಿಕೊಂಡಿದ್ದಾನೆ. ಅರ್ಥಾತ್ ವ್ಯಕ್ತವಾಗಿ ತೋರುವ ಈ ಜಗತ್ತಿನ ಆಧಾರವಾಗಿ ಹಿನ್ನೆಲೆಯಾಗಿ ಅವ್ಯಕ್ತವಾಗಿರುವ ಶಕ್ತಿಯ ದರ್ಶನ ವಿಜ್ಞಾನಿಗೆ ಇಂದು ಉಂಟಾಗಿದೆ.

ಭಾರತದ ಋಷಿ ಮುನಿಗಳು, ಸಾಕ್ಷಾತ್ಕಾರಿಗಳು. ಈ ಪರಮ ಸತ್ಯವನ್ನು ಸಹಸ್ರಾರು ವರ್ಷಗಳ ಹಿಂದೆಯೇ ಅರಿತು ಸಾರಿದರೆನ್ನುವ ವಿಷಯ ಭಾರತೀಯರಿಗೆ ಅಭಿಮಾನದ ಸಂಗತಿ. ಅವರ ಅನ್ವೇಷಣೆಯು ಬೇರೆ ಮಾರ್ಗದಲ್ಲಿತ್ತು. ಸಾಧನೆಯು ಬೇರೆ ವಿಧವಾಗಿತ್ತು. ಅವರ ಸಂಶೋಧನೆಯ ವಸ್ತು ಪಿಂಡಾಂಡ (Human body). ಅವರ ದೃಷ್ಟಿ ಅಂತರ್ದೃಷ್ಟಿ. ಯೋಗನಿಷ್ಠರಾಗಿ ಮಾನವನಲ್ಲಿ ಅಡಗಿರುವ ಅದ್ಭುತವಾದ ಅಂತರಂಗ ಶಕ್ತಿಗಳ ಅರಿವು ಮಾಡಿಕೊಂಡು ಪ್ರಖರ ಸಾಧನೆಯಿಂದ ಅವುಗಳ ಮೇಲೆ ಪ್ರಭುತ್ವವನ್ನು ಹೊಂದಿ ಅನಂತ ಶಕ್ತಿಗಳ ಚಾಲಕವೂ, ಪ್ರೇರಕವೂ ಆದ ಮಹಾಶಕ್ತಿಯೊಂದನ್ನು ಕಂಡುಕೊಂಡು ಅದರ ಪ್ರಭೆಯಲ್ಲಿ ಅಖಂಡಮೂರ್ತಿಗಳಾಗಿ ಬೆಳಗಿ ಸತ್ಯ ಸಾಕ್ಷಾತ್ಕಾರವನ್ನು ಪಡೆದು ತಮ್ಮ ಸಿದ್ಧಿಯ ತೇಜಸ್ಸನ್ನು ಜಗತ್ತಿಗೆ ನೀಡಿದರು. ಸಾಕ್ಷಾತ್ಕಾರದ ಸಂದೇಶವನ್ನು ಸಾರಿದರು. ಅವ್ಯಕ್ತವಾಗಿರುವ ಮಹಾಶಕ್ತಿಯ ಒಂದು ಅಂಶದ ವ್ಯಕ್ತಸ್ವರೂಪವೇ ಈ ಜಗತ್ತು ಎನ್ನುವುದು ಅವರ ಸಂದೇಶ.

ವಿಜ್ಞಾನಿಯು ಸೃಷ್ಟಿಯನ್ನು ತನ್ನ ಸಾಧನೆಯ ವಸ್ತುವನ್ನಾಗಿ ಅಂಗೀಕರಿಸಿ ಸೃಷ್ಟಿಯ ಗರ್ಭದಲ್ಲಿ ಹುದುಗಿರುವ ಅಗಾಧವಾದ ಶಕ್ತಿಗಳನ್ನೂ ಅವುಗಳ ಪ್ರಯೋಜನಗಳನ್ನೂ ಕಂಡುಕೊಳ್ಳುವ ಪ್ರಯತ್ನದಲ್ಲಿ ತೊಡಗಿ ಆ ಮಾರ್ಗದಲ್ಲಿ ಮುಂದುವರಿದು ಸತ್ಯವನ್ನು ಕಂಡುಕೊಳ್ಳಲು ಹವಣಿಸಿದ್ದಾನೆ. ಅವನ ಸಾಧನೆಗೆ ಅನೇಕ ಪ್ರಯೋಗಶಾಲೆಗಳೂ, ಯಂತ್ರ ರಚನೆಗಳೂ, ಅಗಾಧವಾದ ಭೌತಿಕಸಂಪತ್ತನ್ನು ವ್ಯಯ ಮಾಡಿವೆ. ಅವನದು ಹೊರಗಿನ ದೃಷ್ಟಿ. ಅವನ ಸಾಧನೆಯು ಬಾಹ್ಯಮುಖವಾಗಿದೆ. ನೂರಾರು ವರ್ಷಗಳ ಪರಿಶ್ರಮದ ಫಲವಾಗಿ ಇಂದು ಸತ್ಯದ ಮುಂಬೆಳಗು ಕಾಣುತ್ತಲಿದ್ದಾನೆ. ಸಹಸ್ರಾರು ವರ್ಷಗಳ ಹಿಂದೆಯೇ ಸತ್ಯ ಸಾಕ್ಷಾತ್ಕಾರ ಮಾಡಿಕೊಂಡ ಯೋಗಿಯು ಪಿಂಡಾಂಡದಲ್ಲಿನ ಅನಂತ ಶಕ್ತಿಗಳನ್ನು ಅರಿತು ಅದನ್ನೇ ಸಾಧನೆಯ ವಸ್ತುವಾಗಿ ಸ್ವೀಕರಿಸಿ ಸಾಧನಾಪರನಾದನು. ಅವನ ಸಾಧನೆಯು ಅಂತರ್ಮುಖವಾಗಿದೆ. ಪ್ರಯೋಗಶಾಲೆಗಳಿಲ್ಲ. ಯಂತ್ರ ರಚನೆಗಳಿಲ್ಲ. ಭೌತಿಕ ಸಂಪತ್ತಿನ ವ್ಯಯಮಾಡದೆ ಸಂಯಮ ಸಾಧನೆಗಳಿಂದಲೇ ದರ್ಶನವನ್ನು ಪಡೆದಿದ್ದಾನೆ. ತನ್ನ ಅಮರಸಂದೇಶವನ್ನು ಜಗತ್ತಿಗೆ ಕೊಟ್ಟು ಹೋಗಿದ್ದಾನೆ. ಇಂದಿನ ಭಾರತೀಯರು ತಮ್ಮ ಹಿರಿಯರ ಈ ಮಹಾಸಾಧನೆಯ ಅರಿವಿನಿಂದ ಜಾಗೃತರಾಗಿ ತಮ್ಮ ಪ್ರಾಚೀನ ಸಂಸ್ಕೃತಿಯ ಬಗ್ಗೆ, ಹಿರಿಯರ ಬಗ್ಗೆ ಗೌರವವನ್ನು ಹೊಂದಿ ಅಂತಹ ಪವಿತ್ರವಾದ ಸಂಸ್ಕೃತಿಯ ಉಪಾಸಕರಾದಾಗ ಭಾರತದ ನವಜನ್ಮದ ಅಂಕುರವಾದೀತು.

# ಸಿದ್ಧಾಂತ ಶಿಖಾಮಣಿಯಲ್ಲಿ ತತ್ವಸಾಹಿತ್ಯ ಸಂಪತ್ತು

ಸೂರ್ಯ ಸಿಂಹಾಸನಾಧೀಶ್ವರ ಶ್ರೀ ಜ. ಚ. ನಿ.,
ಶ್ರೀಮನ್ನಿಡುಮಾಮಿಡಿ ಶ್ರೀಶೈಲ ಸಂಸ್ಥಾನ, ಗೂಳೂರು

ಭಾರತದ ಧರ್ಮಗಳು ಯುಗಯುಗಗಳಿಂದ ಮೂಡಿ ಮುಂದುವರಿಯುತ್ತ ಬಂದಿವೆ. ಅವು ಇದೀಗ ತಮ್ಮ ಸಂಕುಚಿತ ಸಂಕೋಲೆಯನ್ನು ಹರಿದು ಇದ್ದದ್ದೂ ಮೇಲೇಳತೊಡಗಿವೆ; ಆಗಲಾಗಹತ್ತಿವೆ. ಇನ್ನವು ಆ ಸಂಕೋಲಗೆ ಸಿಕ್ಕಲಾರವು, ಸಿಕ್ಕುವುದಿಲ್ಲ. ಹೆಚ್ಚು ಕಡಿಮೆ ಎಂಬ ಭ್ರಮೆಗೆ ಎಲ್ಲೆ ಮೀರಬಾರದೆಂಬ (ಮತ್ತೊಂದು ಧರ್ಮದ ತಿಳಿವು ನಮಗೆ ಬೇಡೆಂಬ) ನಿದ್ದೆಗೆ ಒಳಗಾಗಲಾರವು, ಒಂದೆಡೆಯಲ್ಲಿಯೇ ಜಡವಾಗಿ ಇರಲಾರವು.

ಅದೋ ಕೇಳಿ : ಸ್ವಾತಂತ್ರ್ಯದ ಸೊಬಗಿನ ಕಹಳೆಯ ಕೂಗು ಕೇಳುತಿವೆ! ಅವರಲ್ಲಿ ಧರ್ಮದ ಧ್ವನಿ ಸಮ್ಮಿಲನವಾಗಿ ಸಾರುತಿವೆ. ನಮ್ಮ ಭಾರತದ ಸ್ವಾತಂತ್ರ್ಯ ಧರ್ಮದಿಂದ ಗಳಿಸಿದ ಸ್ವಾತಂತ್ರ್ಯವಲ್ಲವೆ ? ರಾಜಕೀಯ ಹೃದಯದಲ್ಲಿ ಧರ್ಮ ಪ್ರಾಣವನ್ನು ತುಂಬಿದರು ಭಾರತದ ಹಿರಿಯರು. ಶತಮಾನಗಳಿಂದ ಒಂದಿಲ್ಲೊಂದು ಬಗೆಯಿಂದ ಭಾರತೀಯರ ನಾಡಿಗಳಲ್ಲಿ ಹರಿದುಬಂದ ಆದರ್ಶವಿದು. ಇದು ನಮ್ಮ ಸಂಸ್ಕೃತಿ ! ಇದು ನಮ್ಮ ಸಂಧೃತಿ ! ಇದನ್ನು ಕೈ ಬಿಟ್ಟರೆ ನಮ್ಮ ಸಂಸ್ಕೃತಿ ಹಾಳಾಗುತ್ತದೆ. ನಾವು ಹತವೀರ್ಯರಾಗುತ್ತೇವೆ. ಗೀತೋಪದೇಶಕ್ಕೆ ಪಾತ್ರನಾದ ಅರ್ಜುನನ ಕಥೆ ನಮಗೆ ಸಮರ್ಪಕವಾದ ನಿದರ್ಶನ. ಗೀತೆ ಈ ದಿಶೆಯಲ್ಲಿ ಅಮರ ಸಂದೇಶ; ಅನುಪಮ ಸಂದೇಶ. ಇದರಿಂದಾಗಿ ಭಾರತದ ಸ್ವಾತಂತ್ರ್ಯವೆಂದರೆ ಧಾರ್ಮಿಕ ಸ್ವಾತಂತ್ರ್ಯವೆಂದೇ ಹೇಳಬೇಕು.

ಧರ್ಮ ಭಾರತದ ದಿವ್ಯಶಕ್ತಿ, ಭವ್ಯಮುಕ್ತಿ. ಮಾನವನ ಶರೀರದಲ್ಲಿ ಅನಂತ ರಕ್ತನಾಳಗಳಿರುವಂತೆ. ಭಾರತದಲ್ಲಿ ಅನೇಕ ಧರ್ಮಗಳಿವೆ. ರಕ್ತನಾಳಗಳು ಅದೆಷ್ಟೋ ಇದ್ದರೂ ಉಂಟಾಗುವ ಜೀವನಧೃತಿ ಒಂದೇ. ಧರ್ಮಗಳು ಬೇಕಾದಷ್ಟು ಬಗೆಗಳಾಗಿದ್ದರೂ ಧ್ಯೇಯವೊಂದೇ ; ಸಿದ್ಧಿಯೊಂದೇ.

ಪ್ರಕೃತ "ಸಿದ್ಧಾಂತ ಶಿಖಾಮಣಿ"ಯ ಧರ್ಮ ಷಟ್‌ಸ್ಥಲ ಧರ್ಮ. ವಿಶಾಲವಾದ ಧ್ಯೇಯವನ್ನು ಇಟ್ಟುಕೊಂಡು ಅದು ಜನ್ಮ ತಾಳಿದೆ. ಆಳವಾದ ವಿಚಾರವನ್ನು ಹುದುಗಿಸಿಕೊಂಡು ಮುನ್ನಡೆದಿದೆ. ಮಾನವನು ಯಾವ ಕ್ಷೇತ್ರದಲ್ಲಿಯೇ ದುಡಿಯಲಿ, ಯಾವ ಕಾರ್ಯದಲ್ಲಿಯೇ ಆಸಕ್ತನಾಗಿರಲಿ ಅದರಲ್ಲಿ ಅವನು ಸಿದ್ಧಿಯನ್ನು ಪಡೆವ ವೇಳೆಗೆ ಷಟ್‌ಸ್ಥಲ ಭಾವಗಳನ್ನು ತಾಳಿಯೇ ಆಗಬೇಕು. ಷಟ್‌ಸ್ಥಲವೆಂಬ ಹಂತಗಳನ್ನು ಹತ್ತಿಯೇ ತೀರಬೇಕು. ಆಗ ಅವನು ಸಿದ್ಧಿಯ ಮೇಲುಪ್ಪರಿಗೆಯಲ್ಲಿ ಇರಬಲ್ಲ. ಪ್ರಸಿದ್ಧ ಪುರುಷನಾಗಬಲ್ಲ. ಪರಮಸುಖವ ಪಡೆಯಬಲ್ಲ.

ಈ ವಿಶಾಲವಾದ ಉದ್ದೇಶವನ್ನು ಇಟ್ಟುಕೊಂಡೇ ಶ್ರೀ

ಶಿವಯೋಗಿ ಶಿವಾಚಾರ್ಯನು ಶಿವಾಗಮಗಳಲ್ಲಿರುವ ಷಟ್‌ಸ್ಥಲ ತತ್ತ್ವವನ್ನು ಸಂಗ್ರಹಿಸಿ :

"ಅನುಗ್ರಹಾಯ ಲೋಕನಾಂ ಅಭ್ಯದಾತ್ ಸುಧಿಯಾಂ ವರಃ"

ಜಗತ್ತಿನ ಜನರ ಕ್ಷೇಮಕ್ಕಾಗಿ ಬಿತ್ತರಿಸಿದನು.

ಸಿದ್ಧಾಂತ ಶಿಖಾಮಣಿಯೆಂದು ಹೆಸರಿಸುವಲ್ಲಿ ಶಿವಯೋಗಿ ಶಿವಾಚಾರ್ಯನಿಗೆ ಎಷ್ಟು ಧಾರ್ಷ್ಟ್ಯವಿದೆಯೋ ಅಷ್ಟೇ ದೀರ್ಘಾಲೋಚನೆಯಿದೆ. ಅದರಂತೆಯೇ ಗ್ರಂಥವನ್ನು ಬರೆದಿದ್ದಾನೆ. ಈ ಗ್ರಂಥವು ಸಿದ್ಧಾಂತಗಳಿಗೆಲ್ಲ ಶಿಖಾಮಣಿ. ಇಲ್ಲವೆ ಸಿದ್ಧಾಂತವೆಂಬ ಶಿಖೆಯಲ್ಲಿ ರಂಜಿಸುವ ಮಣಿ. ಇದಕ್ಕೆ ನಿದರ್ಶನವೆಂದರೆ ಮೊದಲಿಗೆ ನಾವು ವಿವರಿಸಿದ "ತ್ರೈಲೋಕ್ಯ ಸಂಪದಾಲೇಖ್ಯ" ಎಂಬ ಪ್ರಥಮ ಶ್ಲೋಕವೇ ಪರಮ ಸಾಕ್ಷಿ! ತಾಳ್ಮೆಯ ತಿಳಿವಿನಿಂದ ಓದುವುದಾದಲ್ಲಿ ಇಡೀ ಗ್ರಂಥವೆ ಪ್ರತ್ಯಕ್ಷ ಸಾಕ್ಷಿ!!

ಗ್ರಂಥಕ್ಕೆ ಅನುಷ್ಟುಭ್ ಛಂದಸ್ಸನ್ನು ಬಳಸಿದ್ದಾನೆ. ಇಪ್ಪತ್ತೊಂದು ಪರಿಚ್ಛೇದಗಳಿವೆ. ಪ್ರತಿಯೊಂದು ಪರಿಚ್ಛೇದದ ಕೊನೆಯ ಶ್ಲೋಕಗಳನ್ನು ಬೇರೆ ಬೇರೆ ವೃತ್ತಗಳಲ್ಲಿ ಬರೆದಿದ್ದಾನೆ. ಶೈಲಿ ನಿರರ್ಗಳವಾಗಿದೆ, ನಿಸರ್ಗವಾಗಿದೆ. ಮೊದಲಿನ ನಾಲು ಪರಿಚ್ಛೇದಗಳು ಕಾವ್ಯ ಸೌಂದರ್ಯಕ್ಕೆ ಮೀಸಲು. ಉಳಿದ ಹದಿನಾರು ಪರಿಚ್ಛೇದಗಳು ತತ್ತ್ವ ಸಂಪತ್ತಿಗೆ ಆಕರ. ಕೊನೆಯದು ವರಾನುಗ್ರಹಕ್ಕೆ ಸಂಬಂಧಿಸಿದ್ದು. ಇವುಗಳಲ್ಲಿ ಶಿವಯೋಗಿ ಶಿವಾಚಾರ್ಯರ ತತ್ತ್ವನಿಷ್ಠೆ, ಪರಿಣತಿ, ಸ್ವಾಭಾವಿಕತೆ ಸ್ವಾನುಭವ, ಸತ್ಯಪ್ರಿಯತೆ ಇವುಗಳನ್ನು ಸಾಕಷ್ಟು ಸವಿಯಬಹುದು.

ಗ್ರಂಥಾರಂಭದಲ್ಲಿ ಶಿವನ ಹೊರತು ಇನ್ನಾರನ್ನೂ ವರ್ಣಿಸಿಲ್ಲ, ಹೆಸರಿಸಿಲ್ಲ. ಶಿವಯೋಗಿ ಶಿವಾಚಾರ್ಯನಿಗೆ ಶಿವನೇ ಸ್ತೋತ್ರಾರ್ಹನಂತೆ. ಯಾವ ಸಂಸ್ಕೃತ ಕವಿಗಳ ಹೆಸರುಗಳನ್ನು ಹೇಳುವ ಗೋಜಿಗೆ ಹೋಗಿಲ್ಲ. ಗ್ರಂಥದ ಅಗ್ಗಳಿಕೆಯನ್ನು ಹೇಳುವ ಸಂಪ್ರದಾಯಕ್ಕೆ ಸಿಕ್ಕಿಲ್ಲ. ನೇರವಾಗಿ ಶಿವಸ್ತುತಿಯನ್ನು ಸುಂದರ ಶೈಲಿಯಲ್ಲಿ ಪ್ರಾರಂಭಿಸುತ್ತಾನೆ. ಶಿವಸ್ತುತಿಯಾದನಂತರ ಜಗನ್ಮಾತೆಯಾದ ಜಗತ್ಪ್ರಕೃತಿಯಾದ, ಧರ್ಮಚಾರಿಣಿಯಾದ, ವಿದ್ಯಾಪ್ರದಾಯಿನಿಯಾದ, ಇಚ್ಛಾಜ್ಞಾನ ಕ್ರಿಯಾ ಸ್ವರೂಪಿಣಿಯಾದ, ಸರ್ವಮಂಗಳೆಯಾದ, ಶಿವಾಭಿನ್ನ ವಾದ ಶಕ್ತಿ ಸ್ತುತಿಯ ಮಾಡಿ ಕೊರತೆಯಿಲ್ಲದ ಕರುಳಿನ ಒಲವನರ್ಪಿಸಿ, ವಂದಿಸಿ ಮುಂದೆ ವಂಶಾವಳಿಯನ್ನು ವರ್ಣಿಸಿ ಜಗತ್ಸೃಷ್ಟಿಯೊಡನೆ ಗ್ರಂಥವನ್ನು ಆರಂಭಿಸುತ್ತಾನೆ. ಶಿವಯೋಗಿ ಶಿವಾಚಾರ್ಯನ ಶೈಲಿಯ ವಿಷಯವಾಗಿ ಮೂರು ಮಾತುಗಳನ್ನು ಮುಂದಿಡುತ್ತೇವೆ.

ಶಿವಯೋಗಿ ಶಿವಾಚಾರ್ಯನದು ಕವಿವಾಣಿ, ಕಾವ್ಯಶೈಲಿ. ಈ ಮಾತಿಗೆ ಕೈಲಾಸ ವರ್ಣನೆ, ಶಿವಶಕ್ತಿ ವರ್ಣನೆ ಮಲಯಾಚಲ ವರ್ಣನೆ, ಆಶ್ರಮ ವರ್ಣನೆ, ಅಗಸ್ತ್ಯನ ವರ್ಣನೆಗಳು ಪೋಷಕವಾಗಿವೆ. ಒಂದೊಂದು ವರ್ಣನೆಯೂ ಒಂದೊಂದು ಕಾವ್ಯದಂತಿವೆ. ಅವುಗಳಲ್ಲಿ ಬರುವ ಪದಲಾಲಿತ್ಯ, ಶಬ್ದ ವೈಖರಿ, ವರ್ಣನ ವೈಚಿತ್ರ್ಯ ವಿಶಿಷ್ಟ, ವೈದುಷ್ಯ, ರೂಪಕ ಸೌಂದರ್ಯ ಮೆಚ್ಚತಕ್ಕವು. ಶಬ್ದ ಜೋಡಣೆಯಲ್ಲಿ ಸುಭಗತೆಯಿದೆ, ಸರಳತೆಯಿದೆ, ಸಹಜತೆಯಿದೆ. ಉಪಮಿಸುವಲ್ಲಿ ನಾವೀನ್ಯವಿದೆ. ಅರ್ಥದಲ್ಲಿ ಅನಂದವಿದೆ, ಅನುಭವವಿದೆ. ಇನ್ನೇನಾಗಬೇಕು? ನಿದರ್ಶನಕ್ಕಾಗಿ ಅಗಸ್ತ್ಯ ವರ್ಣನೆಯನ್ನು ನೋಡಿರಿ!

"ಸಮುಜ್ವಲಜ್ಜಟಾಜಾಲೈಸ್ತಪಃ ಪಾದಪಪಲ್ಲವೈಃ
ಸ್ಫುರತ್ ಸೌದಾಮಿನೀ ಕಲ್ಪೈರ್ಜ್ವಾಲಾಲೈರಿವಾನಲಂ,"
"ಭಸ್ಮಾಲಂಕೃತ ಸರ್ವಾಂಗಂ ಶಶಾಂಕಮಿವಭೂಗತಂ
ವಸಾನಂ ವಲ್ಕಲಂ ನವ್ಯಂ ಬಾಲಾತಪಸಮಪ್ರಭಂ"

'ತಪಸ್ಸೆಂಬ ತರುವಿನ ಚಿಗುರೆಲೆಗಳಂತೆ, ಮಿರುಗುವ ಮಿಂಚುಗಳಂತೆ, ಜ್ವಲಿಸುವ ಜ್ವಾಲೆಯಂತೆ ಅಗಸ್ತ್ಯ ಮುನಿಯ ಕೆಂಜೆಡೆಗಳಿದ್ದವು.

'ಅದೇ ಅಗಸ್ತ್ಯನು ಸರ್ವಾಂಗದಲ್ಲಿ ಭಸ್ಮಧರಿಸಿದ ಕಾರಣ ಇಳೆಗೆ ಇಳಿದುಬಂದ ಚಂದ್ರನಂತೆ ಕಂಗೊಳಿಸಿದನು. ಹೊಸ ನಾರುಮಡಿಯುಟ್ಟುದರಿಂದ ಬಾಲ ಸೂರ್ಯನಂತೆ ಭಾಸವಾದನು'

ಬರೀ ತರುವಲ್ಲ, ತಪಸ್ಸಿಗೆ ನಿಂತ ತರುವಂತೆ! ಚಿಗುರೊಡೆದು ನಿಂತಿದೆ. ಅದರ ತಪಸ್ಸಿನ ಫಲವಾಗಿ ಬಯಸದೆ ಮುಂದೆ ಹೂ-ಕಾಯಿಗಳು ಮೈದೊರಲಿವೆ. ತಮ್ಮ ಕಂಪು, ತನಿರಸಗಳಿಂದ ಜೀವಕೋಟಿಯನ್ನು ತಣಿಸಲಿವೆ. ಈ ಚಿತ್ರವನ್ನೆಲ್ಲ ತಪಸ್ವಿಯಾದ ಅಗಸ್ತ್ಯನಿಗೆ ಹೋಲಿಸಿ ನೋಡಿದಲ್ಲಿ ಆತನಿಗೆ ಮುಂದೊದಗುವ ರೇಣುಕ ಗಣೇಶ್ವರನ ಸಂದರ್ಶನ–ಸದುಪದೇಶಗಳ ಸೌಭಾಗ್ಯವನ್ನು ತನಗೆ ಲಭ್ಯವಾದ ಶಿವಾದ್ವೈತ ಸಿದ್ಧಾಂತವನ್ನು ತನ್ನ ಅನೇಕ ಶಿಷ್ಯರಿಗೆ ಬೋಧಿಸಿ, ತಣಿಸಿ ಕೃತಾರ್ಥರನ್ನಾಗಿಸುವ ಸಾಫಲ್ಯವನ್ನು ಸೂಚಿಸುವುದಿಲ್ಲವೆ? ಒಬ್ಬ ಅಗಸ್ತ್ಯ ಮುನಿಯಲ್ಲಿ ಚಂದ್ರ ಸೂರ್ಯರನ್ನು ಹೋಲಿಸಿ ಹೇಳಿದ ಜಾಣ್ಮೆ ಮೆಚ್ಚತಕ್ಕದ್ದು. ಅಗಸ್ತ್ಯನನ್ನು ವರ್ಣಿಸುವ ವ್ಯಾಜದಲ್ಲಿ ಭಸ್ಮವು ಚಂದ್ರನಂತೆ. ಶಾಂತಿಕರವಾದುದೆಂಬ ಭಸ್ಮದ ಗುಣವನ್ನು ನಮ್ಮ ಗಮನಕ್ಕೆ ತಂದುಕೊಡುತ್ತಾನೆ. ಎಂತಹ ಚೇತೋಹಾರಿಯಾದ ಚಿತ್ರವಿದು!

ಶಿವಯೋಗಿ ಶಿವಾಚಾರ್ಯನು ವರ್ಣನೆಯಲ್ಲಿ ಔಚಿತ್ಯವನ್ನು ಮೀರುವುದಿಲ್ಲ. ಅತಿಯಾಗಿ ಹೇಳುವುದಿಲ್ಲ. ಮತಿಗೆ

ಭ್ರಮಣೆಯನ್ನು ಉಂಟುಮಾಡುವುದಿಲ್ಲ, ಪ್ರಯಾಸದಿಂದ ಪದಗಳನ್ನು ಜೋಡಿಸುವುದಿಲ್ಲ. ಹೇಳಿದ ಸ್ವಲ್ಪ ಮಾತುಗಳಲ್ಲಿಯೇ ಹೇರಳವಾದ ಅರ್ಥ ಹುದುಗಿಕೊಂಡಿರುತ್ತದೆ. ಅದನ್ನು ಅರಿತುಕೊಂಡಷ್ಟು ಆನಂದವುಕ್ಕುತ್ತದೆ.

"ತ್ರಯ್ಯಂತ ಕಮಲಾರಣ್ಯ ವಿಹಾರಕಲಹಂಸಕಂ
ಉದಾರಗುಣವೋಂಕಾರ ಶುಕ್ತಿಕಾಪುಟಮೌಕ್ತಿಕಂ"
"ಕಿನ್ನರೀಗೀತ-ಮಾಧುರ್ಯ ಪರಿವಾಹಿತಗಹ್ವರೇ
ಸಾನಂದವರಯೋಗೀಂದ್ರ ವೃಂದಾಲಂಕೃತಕಂದರೇ"

'ವೇದಾಂತವೆನಿಸುವ ಉಪನಿಷತ್ತುಗಳಲ್ಲಿ ಪರಿವರ್ತಿಸುವ ಪರಶಿವನು ತಾವರೆಯ ಬನದಲ್ಲಿ ವಿಹರಿಸುವ ರಾಜಹಂಸದಂತೆ ರಾಜಿಸಿದನು. ಪ್ರಣವ ಪ್ರಭವನಾದ ಶಿವನು ಮುತ್ತಿನ ಚಿಪ್ಪಿನಲ್ಲಿ ಮೂಡಿದ ಮುತ್ತಿನಂತೆ ಒಪ್ಪಿದನು'.

'ಕಿನ್ನರ ಸ್ತ್ರೀಯರ ಕಿವಿಗಿಂಪಾದ ಗಾನವು ಗವಿಗಳಲ್ಲಿ ತುಂಬಿತ್ತು. ಸನಾಥಿಷ್ಠರಾದ ಸಾನಂದಾದಿ ಯೋಗೀಂದ್ರ ವೃಂದದಿಂದ ಕೈಲಾಸ ತಪ್ಪಲ ಪ್ರದೇಶ ಒಪ್ಪಿತ್ತು'.

ಕಾವ್ಯದಲ್ಲಿ ತತ್ವವನ್ನು, ತತ್ವದಲ್ಲಿ ಕಾವ್ಯವನ್ನು ಹಾಸುಹೊಕ್ಕಾಗಿ ಹೆಣೆವ ಹೆಚ್ಚಿನ ಶಕ್ತಿ ಶಿವಯೋಗಿ ಶಿವಾಚಾರ್ಯನಿಗಿದೆ. ಇದಕ್ಕೆ ಮೇಲ್ಕಂಡ ಮೊದಲನೆ ಶ್ಲೋಕದಲ್ಲಿ ಬರುವ ಶಿವನ ವರ್ಣನೆ ಸುಂದರ ನಿದರ್ಶನ. ಎರಡನೆಯ ಶ್ಲೋಕದಲ್ಲಿ ಸಂಗೀತ ಮಾಧುರ್ಯವನ್ನು ಸಮಾಧಿ ಸೌಂದರ್ಯವನ್ನು ಜೋಡಿಸಿ ವರ್ಣಿಸಿದ ಕಾವ್ಯರ್ಷಿ ಶಿವಯೋಗಿ ಶಿವಾಚಾರ್ಯ. ಶ್ಲೋಕಗಳೆರಡರಲ್ಲಿಯೂ ಶಬ್ದ ಕುಸುಮಗಳನ್ನು ಮಧುರವಾಗಿ ಮನೋಹರವಾಗಿ ಪವಣಿಸಿದುದರೊಡನೆ ಅಂತ್ಯ ಪ್ರಾಸಗಳನ್ನು ಅರಿಯಬೇಕು ವಾಚಕರು. ಪ್ರಥಮ ಶ್ಲೋಕದ ಕೊನೆಯ ಕಂ-ಕಂ ಪ್ರಾಸಾಕ್ಷರಗಳು ಶಕ್ತಿ ವಿಶಿಷ್ಟಾದ್ವೈತ ಪರಬ್ರಹ್ಮನನ್ನು ಬೋಧಿಸುತ್ತವೆ. ಆ ಶ್ಲೋಕದಲ್ಲಿ ವರ್ಣಿಸುವ ವಸ್ತುವೇ ಪರಬ್ರಹ್ಮ. ಅದನ್ನು ಆ ಅಕ್ಷರದಲ್ಲಿಯೇ ತೋರಿದ್ದಾನೆ. ಇನ್ನೊಂದು ಶ್ಲೋಕದ ರೇ-ರೇ, ಪ್ರಾಸಾಕ್ಷರಗಳು ಅದೇ ಶ್ಲೋಕದಲ್ಲಿ ಕಿನ್ನರ ಕನ್ನಿಕೆಯರ ಮನಸೆಳೆವ ಸಂಗೀತವನ್ನು ಸಾನಂದಾದಿ ಯೋಗೀಂದ್ರರ ಮನ ಹರಿದುಹೋಗದಂತೆ ಬಿಗಿಹಿಡಿದ ಸಮಾಧಿಯನ್ನು ಒಂದುಗೂಡಿಸಿದ ಸೋಜಿಗವನ್ನು ಸೂಚಿಸುವಂತಿವೆ. ಶಿವಯೋಗಿ ಶಿವಾಚಾರ್ಯನ ಈ ಅಪೂರ್ವ ಶಕ್ತಿ-ಯುಕ್ತಿಗಳನ್ನು ನೆನೆದು ಉಂಟಾಗುವ ಅನುಭವವನ್ನು, ಆನಂದವನ್ನು ಓದುಗರೇ ಹೇಳಬೇಕು.

"ಝಣತ್ಕಂಕಣ ಜಾತೇನ ಹಸ್ತೇನೋಪನಿಷದ್ವಧೂಃ
ಓಂಕಾರತಾಲ ವೃಂತೇನ ವಿಜಯಾಮಾಸ ಶಂಕರಮ್"

ವೇದಾಂತವನ್ನೆಲ್ಲ ಒಡಲೊಳಗಿರಿಸಿಕೊಂಡು ವರ್ಣಿಸಿದ ರುಚಿ-ಶುಚಿಗಳನ್ನು ಈ ಶ್ಲೋಕದಲ್ಲಿ ಕಾಣಬೇಕು. ವಧು ಪ್ರಯೋಗದ ಔಚಿತ್ಯವನ್ನು ಅರಿಯಬೇಕು. ಪರಮಾತ್ಮನ ಬಳಿಗೆ ಬಂದು ಗಾಳಿಹಾಕುವ ಉಪನಿಷದ್ವಧು, ಪ್ರೇಮ ಮೂಡಿಬಾರದ ಎಳೆ ಹುಡುಗಿಯಲ್ಲ. ಅದೇ ಮದುವೆಯಾಗುವ ಮದುಮಗಳು. ಭಾವ ತುಂಬಿ ಬಂದ ಹೃದಯ. ಬನ ತುಂಬಿ ಅಂದವಾಗಿ ತೋರುವ ಹಸ್ತ. ಜನರೆನುವ ಕರೆ. ಮಳೆ ಕರಗುವ ಕಣ್ಣೀರು. (ಕಂಕಣ ಪದಪ್ರಯೋಗದಿಂದ ಈ ಅರ್ಥವನ್ನು ಮಾಡಲಾಗಿದೆ. ವಧೂ ಶಬ್ದದಂತೆ ಕಂಕಣ ಶಬ್ದದ ಔಚಿತ್ಯವೂ ಅರಿಯತಕ್ಕುದಾಗಿದೆ.) ಓಂಕಾರವೆ ತಾಳೆಯ ಬೀಸಣಿಗೆ. ಉಲ್ಲಾಸ ಹುಟ್ಟಿಸುವ ಗಾಳಿ. ಇಷ್ಟೆಲ್ಲ ಆದ ಮೇಲೆ ಶಂಕರನಾದರೇನು, ಉಪನಿಷದ್ವಧುವಿಗೆ ಒಲಿಯದೆ ಇರುವನೆ ?

ಆಹ ! ಏನು ಮನಂಬಗುವ ಬಣ್ಣನೆ ! ಏನು ಭಾವ ಬಳಕುವ ಭವ್ಯತೆ ! ಶಿವಯೋಗಿ ಶಿವಾಚಾರ್ಯನು ರಸವನ್ನು ರಹಸ್ಯವನ್ನು ರೂಹಿಸಿ ಕೃತಾರ್ಥನಾಗಿದ್ದಾನೆ. ಇದರಲ್ಲಿ ಕವಿಗಳು ಕಾವ್ಯರಸವನ್ನು ಪಾನಮಾಡಬಲ್ಲರು. ಯೋಗಿಗಳು ತತ್ವ ರಹಸ್ಯವನ್ನು ಕಂಡು ಹುರಿಷಿಸಬಲ್ಲರು.

ಹೆಣ್ಣು ಮಾಯೆ ಎಂಬರು. ಹೆಣ್ಣು ಹೇಯ ಎಂಬರು. ಹೆಣ್ಣು ಮಾರಿ, ಮಸಣಿ ಎಂಬರು. ಹೆಣ್ಣು ಸಂಸಾರದ ತೊಡಕಿಗೆ ಕಾರಣ ಎಂಬರು. ಇದೆಲ್ಲ ಸುಳ್ಳು. ಇದೆಲ್ಲ ಭ್ರಮೆ. ಹೆಣ್ಣನ್ನು ನೋಡುವ ಕಣ್ಣಿನಲ್ಲಿ ಕಲ್ಮಷವಿದೆ. ನೆನೆವ ಮನದಲ್ಲಿ ಕಾಳಿಕೆಯಿದೆ. ನಿಜವಾಗಿಯೂ ಹೆಣ್ಣು ಸಂಸಾರಬಂಧನವನ್ನು ಬಿಡಿಸಬಲ್ಲದು. ಸಮಸ್ತ ಭೋಗ, ಮೋಕ್ಷಗಳೆರಡಕ್ಕೂ ಸಾಧನ-ಎಂಬುದನ್ನು ಶಿವಯೋಗಿ ಶಿವಾಚಾರ್ಯನು ಕೆಳಗಿನ ಪಂಕ್ತಿಗಳಲ್ಲಿ ಚಿತ್ರಿಸಿದ್ದಾನೆ.

"ಸಮಸ್ತಲೋಕ ನಿರ್ಮಾಣ ಸಮವಾಯ ಸ್ವರೂಪಯಾ,
ಸಂಸಾರ ವಿಷಕಾಂತಾರ ದಾಹದಾವಾಗ್ನಿ ಲೇಖಯಾ"

ಇದಕ್ಕಿಂತಲೂ ಪವಿತ್ರ ದೃಷ್ಟಿ ಬೇಕೆ ? ಅಪ್ರಾಕೃತ. ಸೃಷ್ಟಿ ಬೇಕೆ ? ಲೋಕ ನಿರ್ಮಾಣಕ್ಕೂ, ಲೋಕ ನಾಕ ಸುಖ ಪ್ರಮಾಣಕ್ಕೂ ಶಕ್ತಿಯೇ ಕಾರಣವಾಗಿದ್ದಾಳೆ ಎಂದು ಹೃದಯಾರೆ ಹೇಳುವ ಶಿವಯೋಗಿ ಶಿವಾಚಾರ್ಯನ ಸತ್ಯ ಪ್ರೇಮವನ್ನು ಗುಣಪಕ್ಷವನ್ನು ಚೆನ್ನಾಗಿ ಗುರುತಿಸಬಹುದಾಗಿದೆ. ಶಕ್ತಿಯು ಭಕ್ತಿಗೆ-ಮುಕ್ತಿಗೆ ತವರ್ಮನೆಯೆಂಬ ಈ ಗ್ರಂಥಕರ್ತನ ದಿವ್ಯ ಸಂದೇಶವನ್ನು ಹೆಮ್ಮೆಯಿಂದ ಹೊಗಳಬಹುದಾಗಿದೆ. ಮಾಯಾ ವಿಷಯದಲ್ಲಿ ಶಿವಯೋಗಿ ಶಿವಾಚಾರ್ಯನು ತಾನು ಹೇಳಿದ್ದು ನಿಜವಲ್ಲವೆ ? ನೀವು ಒಪ್ಪುವುದಿಲ್ಲವೆ ? ಎಂದು ಶ್ಲೋಕದ ಕೊನೆಯಲ್ಲಿರುವ ಯಾ-ಯಾ ಅಕ್ಷರಗಳಿಂದ ಶಕ್ತಿ ತತ್ವವನ್ನು ಹೀನವಾಗಿ ಕಾಣುವವರನ್ನು

ಇಂದಿಗೂ, ಮುಂದಕ್ಕೂ ಕೇಳುವಂತಿದೆ.

ಭಾರತದ ಭೂಮಿಯಲ್ಲಿ ಶಿವಾದ್ವೈತ ಸಿದ್ಧಾಂತವನ್ನು ನಿರ್ವಹಿಸುವ ಮಣಿಹಕ್ಕಾಗಿ ಮಹಾದೇವನಿಂದ ಆಜ್ಞಪ್ತರಾದ ಶ್ರೀ ಜಗದ್ಗುರು ರೇಣುಕಾಚಾರ್ಯರು ಅವತರಿಸುತ್ತಾರೆ. ಅವಲೋಕಿಸೋಣ !

"ಭಸ್ಮೋದ್ಧೂಳಿತ ಸರ್ವಾಂಗಂ ಸಾರರುದ್ರಾಕ್ಷಭೂಷಣಮ್
ಜಟಾಮುಕುಟ ಸಂಯುಕ್ತಂ ತ್ರಿಪುಂಡ್ರಾಂಕಿತ ಮಸ್ತಕಮ್"
"ಶಿವಾಗಮ ಸುಧಾಸಿಂಧು ಸಮುನ್ಮೇಷ ಸುಧಾಕರಮ್
ಚಿತ್ತಾರವಿಂದ ಸಂಗೂಢ ಶಿವ ಪದಾಂಭುಜದ್ವಯಮ್"
"ವೀರಸಿದ್ಧಾಂತ-ನಿರ್ವಾಹಕೃತ ಪಟ್ಟನಿಬಂಧನಮ್
ಆಲೋಕಮಾತ್ರನಿರ್ಭಿನ್ನ ಸಮಸ್ತ ಪ್ರಾಣಿಪಾತಕಮ್"
"ತಮುಪೃಚ್ಛನ್ ಜನಾಃ ಸರ್ವೇನಮಂತಃಕೋಭವಾನಿತಿ
ನಾಮ್ನಾರೇಣುಕಸಿದ್ಧೋSಹಂ ಸಿದ್ಧಸಂತಾನ ನಾಯಕಃ"

ನೋಡಿ ಕೃತಾರ್ಥರಾದೆವು. ಭಸ್ಮ, ರುದ್ರಾಕ್ಷಿ, ಜಟೆಗಳನ್ನು ಧರಿಸಿದ ಮಂಗಲಮಯ ಮೂರ್ತಿ. ಶಿವಾಗಮಜ್ಞ, ಶಿವಭಕ್ತ ಸಂಪನ್ನ, ಶಿವಾದ್ವೈತ, ಸಿದ್ಧಾಂತ-ನಿರ್ವಾಹಕ, ಜಗದ ಜೀವ ಕೋಟಿ ಉದ್ಧಾರಕ, ಜಗದ್ಗುರು ರೇಣುಕ ಇನ್ನೇನಾಗಬೇಕು ?

ಈ ವರ್ಣನೆಯಿಂದ ಅಂದಿನ ವಾತಾವರಣವನ್ನು ಭಾವಿಸಬಹುದಾಗಿದೆ. ಅಂದಿನ ನಡೆ-ನುಡಿ, ಶಿವಲಾಂಛನ ಶಿವಾಗಮಾಭ್ಯಾಸ, ಶಿವಭಕ್ತ ಸಿದ್ಧಾಂತ ಪ್ರತಿಪಾದನೆ ಜೀವಕಾರುಣ್ಯ ಮೊದಲಾದವುಗಳು ಮನದಟ್ಟಾಗುವಂತಿವೆ. ಶಿವಯೋಗಿ ಶಿವಾಚಾರ್ಯನಿಗೆ ಶ್ರೀ ರೇಣುಕರಲ್ಲಿದ್ದ ಗಾಢ ಭಕ್ತಿಯು ಒಡಮೂಡುತ್ತದೆ. ತತ್ವನಿಷ್ಠೆಯು ಚಿಮ್ಮುತ್ತದೆ.

"ನವಚಂದನ ಕಾಂತಾರ ಕುಂದಲನ್ಮಂದ ಮಾರುತಮ್
ಅಭಂಗುರ ಭುಜಂಗಸ್ತ್ರೀ ಸಂಗೀತ ರಸ ಸಂಕುಲಮ್,
ಕರಿಪ್ರೋತ ಕರಾಕೃಷ್ಟ ಸ್ಫುರದೇಲಾತಿ ವಾಸಿತಮ್
ವರಾಹದಂಷ್ಟ್ರಿಕಾಧ್ವಸ್ತ ಮುಸ್ತಾಸುರಭಿಕಂದರಮ್,
ಪಟೀರದಲಪರ್ಯಂತ ಪ್ರಸುಪ್ತವ್ಯಾಧದಂಪತಿಮ್
ಮಾಧವೀ ಮಲ್ಲಿಕಾಜಾತೀ ಮಂಜರೀ ರೇಣುಕರಂಜಿತಮ್"

ಮನೋಹರವಾದ ಮಲಯಾಚಲ ಚಿತ್ರವಿದು. ಶ್ರೀ ರೇಣುಕರು ಅಗಸ್ತ್ಯಾಶ್ರಮಕ್ಕೆ ಚಿತ್ತೈಸುತ್ತ ಈ ದೃಶ್ಯವನ್ನು ದಿಟ್ಟಿಸುತ್ತಾರೆ. ಮಂದವಾಗಿ ಬೀಸುವ ಮಲಯ ಮಾರುತ. ಮಂಜುಳವಾಗಿ ಹಾಡುವ ನಾಗಕನ್ನೆಯರ ಸಂಗೀತ, ಕಾಡಾನೆಗಳು ಕಿತ್ತೆಸೆದ ಏಲಕ್ಕಿ ಬಳ್ಳಿಯ ಕಂಪು ಹರಡಿದೆ. ಕಾಡುಹಂದಿಗಳು ಕೋರೆದಾಡೆಯಿಂದ ಬಗೆದ ಜೇಕಿನ ಗೆಡ್ಡೆಗಳ ಪರಿಮಳ ಕಂದರಗಳಲ್ಲೆಲ್ಲ ಪ್ರಸರಿಸಿದೆ. ಅಲ್ಲಲ್ಲಿ ವ್ಯಾಧ ದಂಪತಿಗಳು ಶ್ರೀಗಂಧದ ಚಿಗುರೆಲೆಗಳ ಹಾಸುಗೆಯ ಮೇಲೆ ಮಲಗಿದ್ದಾರೆ. ಮಾಧವೀ ಮಲ್ಲಿಗೆ ಮುಂತಾದ ಹೂಬಳ್ಳಿಗಳಲ್ಲಿ ಹೂಗೊಂಚಲುಗಳು ಬಿರಿದಿವೆ. ಹೂಧೂಳಿಯಿಂದ ಅಲ್ಲಿ ನೆಲಕ್ಕೆ ಒಂದು ಶೋಭೆಯೊದಗಿದೆ. ಈ ಅರಣ್ಯವರ್ಣನೆಯನ್ನು ಓದುವಾಗ ಅರಣ್ಯದಲ್ಲಿ ಹಾದು ಹೋಗುವ ಶ್ರಮವೊದಗುವದಿಲ್ಲ. ವರ್ಣನೆ ಸುಲಭವಾಗಿದೆ, ಸುಭಗವಾಗಿದೆ. ಶಬ್ದಾಲಂಕಾರವು ಸಹಜ ವರ್ಣನೆಯು ಓದುಗರ ಉಲ್ಲಾಸವನ್ನು ಕೆರಳಿಸುತ್ತದೆ. ಇನ್ನು ಕೊನೆಯದಾಗಿ ಅಗಸ್ತ್ಯರ ಆಶ್ರಮಕ್ಕೆ ಹೋಗಿ ವಿಶ್ರಮಿಸೋಣ ಬನ್ನಿರಿ !

"ಮಂದಾರ ಚಂದನ ಪ್ರಾಯೈರ್ಮಂಡಿತಂ ತರುಮಂಡಲಮ
ಮುನಿಕನ್ಯಾಕರಾನೀತ ಕಲಶಾಂಬು ವಿವರ್ಧಿತೈಃ
ಆಲವಾಲ ಜಲಸ್ವಾದ್ರವನೋದಮಾನಮೃಗೀಗಣೈಃ
ಹೇಮಾರವಿಂದ ನಿಷ್ಯಂದ ಮಕರಂದ ಸುಗಂಧಿಭಿಃ
ಲೋಪಮುದ್ರಾ ಪದನ್ಯಾಸ ಚರಿತ್ರಾರ್ಥ ತಟಾಂಕಿತೈಃ
ನಿತ್ಯನೈಮಿತ್ತಿಕಸ್ನಾನ ನಿಯಮಾರ್ಥೈ ಸ್ತಪಸ್ವಿನಾಮ್
ಪ್ರಕೃಷ್ಟ ಮಣಿಸೋಪಾನೈಃ ಪರಿವೀತಂ ಸರೋವರೈಃ
ವಿಮುಕ್ತ ಸತ್ವವೈರಸ್ಯಂ ಬ್ರಹ್ಮಲೋಕಮಿವಾಪರಮ್"

ಮಂದಾರ ಚಂದನ ಮರಗಳನ್ನು ನೋಡಬೇಕೆ ? ಮರಗಳಿಗೆ ನೀರು ಹೊಯ್ಯುವ ಮುನಿಕನ್ನೆಯರನ್ನು ಕಾಣಬೇಕೆ ? ಮಡಿಗಳಲ್ಲಿದ್ದ ನೀರನ್ನು ಕುಡಿಯುವ ಹರಿಣಿಗಳನ್ನು ನಿಟ್ಟಿಸಬೇಕೆ ? ಹೊಂದಾವರೆಗಳ ಮಕರಂದವನ್ನು ಮೂಸಿಸಬೇಕೆ ? ಲೋಪಾಮುದ್ರೆಯ ಹೆಜ್ಜೆಗಳಿಂದ ಪವಿತ್ರವಾದ ಆಶ್ರಮ ಪ್ರದೇಶವನ್ನು ಪರೀಕಿಸಬೇಕೆ ? ತಪಸ್ವಿಗಳ ವೇದಘೋಷವನ್ನು ಕೇಳಬೇಕೆ ? ತಪಸ್ವಿಗಳ ಸ್ನಾನಕ್ಕಾಗಿ ಮಣಿಸೋಪಾನಗಳನ್ನು ಕಟ್ಟಿದ ಸರೋವರಗಳಲ್ಲಿ ಮೀಯಬೇಕೆ? ವಿಶ್ರಾಮ ಸಾಹಿತ್ಯ ಯಾವುದು ಬೇಕೋ ಅದೆಲ್ಲವು ಅಗಸ್ತ್ಯಾಶ್ರಮದಲ್ಲಿದೆ. ರಾಗದ್ವೇಷವಿಲ್ಲ, ಮದ-ಮತ್ಸರವಿಲ್ಲ, ಪ್ರಶಾಂತವಾಗಿವೆ. ಪರಬ್ರಹ್ಮಲೋಕದಂತಿವೆ. ಇದು ಅಗಸ್ತ್ಯಾಶ್ರಮ. ಇಲ್ಲಿ ಪರಿಹರಿಸಿಕೊಳ್ಳಿ ನಿಮ್ಮ ಶ್ರಮ !

ಹೀಗೆ ಶಿವಯೋಗಿ ಶಿವಾಚಾರ್ಯನು ವರ್ಣನೆಗಳಲ್ಲಿ ತನ್ನದೇ ಆದ ಒಂದು ವೈಶಿಷ್ಟ್ಯವನ್ನು ತುಂಬಿ ತೋರಿದ್ದಾನೆ. ತನ್ನ ಈ ಕಾವ್ಯವೆಂಬ ಸೌಂದರ್ಯ ವೇದಿಕೆಯ ಮೇಲೆ ಪಟಸ್ಥಲ ದಿವ್ಯ ಮೂರ್ತಿಯನ್ನು ಪ್ರತಿಷ್ಠಿಸಿದ್ದಾನೆ. ವೇದಿಕೆಯೇ ಇಷ್ಟೊಂದು ಮನೋಹರವಾಗಿರುವಾಗ ಮೇಲಿನ ಮೂರ್ತಿ ಎಷ್ಟು ಮುದ್ದಾಗಿರಬೇಕು ? ಅಂತಹ ಅಂದವಾದ ಮೂರ್ತಿಯನ್ನು ಕೆತ್ತಿದ ಶಿಲ್ಪಿ ಶಿವಯೋಗಿ ಶಿವಾಚಾರ್ಯನ ಶಕ್ತಿ ಎಂತಹದಿರಬೇಕು ? ಎಂಬುದನ್ನು ತಿಳಿವ ಆಸಕ್ತಿ ಹುಟ್ಟುವುದು ಸಹಜ. ಆ ಶಕ್ತಿಯನ್ನು ಕೆರಳಿಸುವ ಈ ಗ್ರಂಥ ಅಪೂರ್ವ ಕೃತಿ. ಇವನೊಬ್ಬ ಅಸದೃಶ ಕವಿ. ಅಸಾಮಾನ್ಯ ಯೋಗಿ.

ನೂರೊಂದು ಅವಾಂತರ ಸ್ಥಲಗಳನ್ನೊಳಗೊಂಡ ಪಟ

ಸ್ಥಲವನ್ನು ಸಂಸ್ಕೃತ ವಾಙ್ಮಯದಲ್ಲಿ ಸರಸ್ಯ-ಸ್ವಾರಸ್ಯ ಶೈಲಿಯಲ್ಲಿ ಮೊತ್ತ ಮೊದಲು ಗ್ರಂಥರೂಪದಲ್ಲಿ ರಚಿಸಿದ ಕೀರ್ತಿ ಶಿವಯೋಗಿ ಶಿವಾಚಾರ್ಯನದು. ಶಿವಾದ್ವೈತ ಸಿದ್ಧಾಂತವನ್ನು ಸಾಕಲ್ಯವಾಗಿ ಸಂಸ್ಕೃತಜ್ಞರು ತಿಳಿವಂತೆ ಬರೆದು ಕರ್ತವ್ಯವನ್ನು ನೆರವೇರಿಸಿದ್ದಾನೆ. ವೀರಶೈವರ ಷಟಸ್ಥಲ ತತ್ವಧ್ವಜವನ್ನು ಮೊದಲು ಎತ್ತಿ ಹಾರಿಸಿದ್ದಾನೆ. ಷಟಸ್ಥಲದ ಭೌತಿಕ ತಾತ್ವಿಕ ವಿಜ್ಞಾನದ ಭವ್ಯ ಬೆಳಗನ್ನು ಹರಡಿದ್ದಾನೆ.

ಸಿದ್ಧಾಂತ ಶಿಖಾಮಣಿಯು ಮೊದಲಿನ ನಾಲ್ಕು ಪರಿಚ್ಛೇದಗಳಲ್ಲಿ ಕಾವ್ಯವಾಗಿ ಮುಂದಿನ ಹದಿನಾರು ಪರಿಚ್ಛೇದಗಳಲ್ಲಿ ಶಾಸ್ತ್ರವಾಗಿ ಹೊರಹೊಮ್ಮಿದೆ. ಈ ಸಿದ್ಧಾಂತ ಶಿಖಾಮಣಿಯು ವೀರಶೈವ ಸರಣಿ, ಉದ್ಯನ್ಮಣಿ, ಪದ್ಮತರಣಿ, ಚಿಂತಾಮಣಿ ಎಂದು ಕವಿ ಸಮಂಜಸವಾಗಿ ಸತ್ಯಾರ್ಥ ಪ್ರಕಾಶವಾಗಿ ಸುಂದರವಾಗಿ ಶಿವಯೋಗಿ-ಶಿವಕವಿ ಹೀಗೆ ಹೇಳಿದ್ದಾನೆ.

ಶ್ರೀ ವೇದಾಗಮ ವೀರಶೈವ ಸರಣಿಂ, ಶ್ರೀ ಷಟ್ಸ್ಥಲೋದ್ಯನ್ಮಣಿಮ್
ಶ್ರೀ ಜೀವೇಶ್ವರ ಯೋಗ ಪದ್ಮತರಣಿಂ, ಶ್ರೀ ಗೋಪ್ಯಚಿಂತಾ ಮಣಿಮ್
ಶ್ರೀ ಸಿದ್ಧಾಂತ ಶಿಖಾಮಣಿಂ ಲಿಖತಿಯಸ್ತಂ ಲೇಖಯತ್ಯಾದರಾತ್
ಶ್ರೋತಾ ಶ್ರಾವಯಿತಾ ಸಯಾತಿ ವಿಮಲಾಂ ಭುಕ್ತಿಂ, ಚ ಮುಕ್ತಿಂ ಪರಾಮ್

ಮೇಲಿನ ಎರಡು ಪಂಕ್ತಿಗಳಲ್ಲಿ ಹೇಳಿದ ನಾಲ್ಕು ಮಾತುಗಳು ನಾಲ್ಕು ವೇದಕ್ಕೆ ಸಮಾನವಾದವು. ಈ ಗ್ರಂಥದ ವಿಷಯದಲ್ಲಿ ಆ ನಾಲ್ಕು ಮಾತುಗಳು ತುಂಬಾ ಸಮರ್ಪಕವಾಗಿವೆ. ಆ ನಾಲ್ಕು ಮಾತುಗಳು ಗ್ರಂಥದ ಶಕ್ತಿಯನ್ನು ಹೃದಯವನ್ನು ಸಹಜವಾಗಿ ಚಿತ್ರಿಸಿವೆ, ವಿಮರ್ಶಿಸಿವೆ. ಗ್ರಂಥದ ವಿಷಯದಲ್ಲಿ ಆ ನಾಲ್ಕು ಮಾತುಗಳಿಗಿಂತ ಮಿಗಿಲಾಗಿ ಹೇಳಹೊರಡುವುದು ಸಾಹಸದ ಮಾತು, ಪರಿಹಾಸ್ಯದ ಮಾತು. ಶಿವಯೋಗಿ ಶಿವಾಚಾರ್ಯನು ಸಿದ್ಧಾಂತ ಶಿಖಾಮಣಿಯಲ್ಲಿ ಮೊದಲು ಕವಿಯಾಗಿ ಪ್ರತಿಬಿಂಬಿಸಿದ್ದಾನೆ. ನಂತರ ಶಿವಯೋಗಿಯಾಗಿ ನಿಜಬಿಂಬವಾಗಿ ನಿಂತಿದ್ದಾನೆ. ಸಿದ್ಧಾಂತ ಶಿಖಾಮಣಿ ಸಕಲರ ಹೃದಯವನ್ನು ಅರಳಿಸುತ್ತದೆ. ಗುರುತಿಸಿಕೊಳ್ಳಬೇಕೆಂಬುವರ ಗುರಿಗಳನ್ನೆಲ್ಲ ಕರಗತಮಾಡಿಕೊಡುತ್ತದೆ. ಇನ್ನೇನಾಗಬೇಕು ? ಒಂದೇ ಗ್ರಂಥದಲ್ಲಿ ಕಾವ್ಯಶಕ್ತಿಯನ್ನು ಶಾಸ್ತ್ರಸಿದ್ಧಿಯನ್ನು ತೋರಿ ಕಾವ್ಯ ಪ್ರಪಂಚದಲ್ಲಿ ಶಾಸ್ತ್ರ ಪರಮಾರ್ಥದಲ್ಲಿ ತೊಳಗಿ ಬೆಳಗಿದ ಅಪೂರ್ವ-ಅಸಾಮಾನ್ಯ ವ್ಯಕ್ತಿತ್ವ ಶಿವಯೋಗಿ ಶಿವಾಚಾರ್ಯನದು. ಆತನ ಆದರ್ಶ ವ್ಯಕ್ತಿತ್ವಕ್ಕೆ ಈ ಗ್ರಂಥವೊಂದೇ ಸಾಕು ! ಆ ಋಷಿಕವಿಯ ಆ ಶಿವಯೋಗಿಯ ನಿಜ ನಿಲುವನ್ನು ಚೆನ್ನಾಗಿ ಇದರಲ್ಲಿ ನಿಟ್ಟಿಸಬಹುದಾಗಿದೆ. ಎಂದೆಂದಿಗೂ ನಿಟ್ಟಿಸಬಹುದಾಗಿದೆ. ಜೊತೆಗೆ ಶಿವಯೋಗಿ ಶಿವಾಚಾರ್ಯನ ಸಾಹಿತ್ಯ ಸಂಪತ್ತನ್ನೂ ನಿಟ್ಟಿಸಬಹುದಾಗಿದೆ.

ಇತಿ ಶಿವಂ

---

## ಸಂಸ್ಕೃತ ಸುಭಾಷಿತಗಳು

ಕುಂಭಃ ಪರಿಮಿತಮಂಭಃ ಪಿಬತಿ
ಅಸೌಕುಂಭಸಂಭವಃ ಅಂಬೋಧಿಮ್ ।
ಅತಿರಿಚ್ಯತೇ ಸುಜನ್ಮಾ ಕಶ್ಚಿಜ್ಜನಕಂ ನಿಜೇನ ಚರಿತೇನ

ಕೊಡವು ತನಗೆ ಹಿಡಿಸುವಷ್ಟು ಪರಿಮಿತ ಜಲವನ್ನು ಕುಡಿಯುವುದು. ಆದರೆ ಆ ಕೊಡದಿಂದ ಹುಟ್ಟಿಬಂದ ಅಗಸ್ತ್ಯಮುನಿ ಮಾತ್ರ ಸಮುದ್ರವನ್ನೇ ಕುಡಿದನು. ನಿಜವಾದ ಧೀರರು ತಮ್ಮ ಸತ್ವಯುಕ್ತ ಚರಿತ್ರೆಯಿಂದ ತಮ್ಮ ತಂದೆಗಳನ್ನೂ ಮೀರಿಸಿ ಮುಂದೆ ಬರಬಲ್ಲರು.

ರಾಜಾಕುಲವಧೂಃ ವಿಪ್ರಾಃ ಮಂತ್ರಿಣಶ್ಚಪಯೋಧರಾಃ ।
ಸ್ಥಾನಭ್ರಷ್ಟಾನ ಶೋಭಂತೇದಂತಾಃ ಕೇಶಾಃ ನರಾಃ ನಖಾಃ ॥

ಬಿದ್ದ ಹಲ್ಲಾಗಲಿ, ಕಿತ್ತ ಕೂದಲಾಗಲಿ, ಕತ್ತರಿಸಿದ ಉಗುರಾಗಲಿ, ಸ್ಥಾನಭ್ರಷ್ಟವಾದರೆ ಶೋಭಿಸುವುದಿಲ್ಲ. ಹಾಗೆಯೇ ರಾಜರುಗಳಾಗಲಿ, ಮಂತ್ರಿಗಳಾಗಲಿ, ಕುಲಸ್ತ್ರೀಯರಾಗಲಿ, ಪರಯೋಧರೆಯಾಗಲಿ, ಸ್ಥಾನಭ್ರಷ್ಟರಾದರೆ ಶೋಭಿಸುವುದಿಲ್ಲ.

# ಹರಿಹರದೇವನ ಮಲುಹಣರಗಳೆ

ಶ್ರೀ ಮ. ಮಲ್ಲಪ್ಪ, ಜ್ಞಾನ ಮಂದಿರ, ಹಲಗೂರು

ಹರಿಹರ ದೇವನದು ಒಂದು ವಿಶಿಷ್ಟ ಭಕ್ತಿಮಾರ್ಗ. ಭಕ್ತಿಯೇ ಸಾಕ್ಷಾತ್ಕಾರವಾಗಿ ಮಾನವನ ರೂಪವನ್ನು ತಾಳಿರುವಂತೆ ತನಗೆ ಬೇಕಾದ ಪ್ರತಿಕೃತಿಗಳನ್ನು ತನ್ನ ಹೃದಯ ಗರ್ಭ ಗುಡಿಯಲ್ಲಿ ಪ್ರತಿಷ್ಠಿಸಿ ಕವಿಯು ಪಂಪಾಪತಿಯ ಕೃಪೆಗೆ ಪಾತ್ರನಾಗುತ್ತಾನೆ. ರಗಳೆಗಳಲ್ಲಿ ಬರುವ ಪ್ರತಿಯೊಬ್ಬ ಭಕ್ತ-ಭಕ್ತೆಯರ ಪಾತ್ರವೂ ಈತನ ಭಕ್ತಿಯ ಒಂದು ಪ್ರತೀಕವಾಗಿದೆ. ರಗಳೆಯ ಹೊಸ ಛಂದಸ್ಸಿನಲ್ಲಿ ಭಾವಮಯವಾದ ಶಿವಭಕ್ತರ ಕಥೆಗಳನ್ನು ಉದ್ವೇಗ ತುಂಬಿ ಹಾಡಿದವನಿವನು ಎಂದು ಈತನ ವಿಚಾರದಲ್ಲಿ 'ಕವಿಕಾವ್ಯ ಪರಿಚಯ'ದಲ್ಲಿ ಇದೆ. ಈ ರಗಳೆಗಳಲ್ಲಿ ಕಾಣಬರುವ ಕಣ್ಣಪ್ಪನಾಗಲಿ, ತಿರುನೀಲಕಂಠ ನಾಗಲಿ, ಮಲುಹಣನಾಗಲಿ ಯಾರೇ ಆಗಲಿ ಸಕಲರೂ ಹರಿಹರದೇವನ ಭಕ್ತಿಯ ಒಂದೊಂದು ವಿಶೇಷಭಂಗಿಯ ಪ್ರತಿಮೆಗಳು. ಕಷ್ಟಗಳಿಗಾಗಿ ಕರಗವೆ ಮುನ್ನುಗ್ಗಿದರೆ ಮಾತ್ರ ಪರದಲ್ಲಿ ಪರಮಾನಂದವನ್ನು ಪಡೆಯುವಂತಾಗುತ್ತದೆ.

ಈ ತತ್ವದ ಬುನಾದಿಯ ಮೇಲೆ ಹರಿಹರನು ಕಾವ್ಯವನ್ನು ಕಡೆಯುವೆ ಇಲ್ಲ. ಈ ಮಥನದ ಫಲವೇ 'ಮಲುಹಣನ ರಗಳೆ'. ಹರಿಹರ ದೇವನ ಪ್ರಾಸಾದಿಕ ವಾಣಿಯಿಂದ ಹೊರಹೊಮ್ಮಿದ ಮನೋಹರ ಮಧುಪಾತ್ರೆಯೇ 'ಮಲುಹಣ ರಗಳೆ'. ಇದರಲ್ಲಿ ಹರಿಹರ ದೇವನ ಅನೇಕ ಸಾಧನೆಗಳನ್ನು ನೋಡಬಹುದಾಗಿದೆ. ಸಂಪ್ರದಾಯ ಶರಣತೆಯ ಶಬ್ದಾಲಂಕಾರ, ಅರ್ಥಾಲಂಕಾರ ಇವುಗಳ ವರ್ಣನೆಗಳು ಇಲ್ಲಿವೆ. ಚಿತ್ರತರವಾದ ಬಗೆಯಲ್ಲಿ ಸನ್ನಿವೇಶಗಳ ವಿಸ್ತಾರವಾದ ವರ್ಣನೆಗಳನ್ನು ಅಳವಡಿಸಿ ಶೃಂಗಾರ ಪರಿಕರದ ಮೇಲೆ ಕಾವ್ಯ ಪರಿಕರವನ್ನು ಸುರಿದು ಶೃಂಗಾರ ಪೂಜೆಯನ್ನು ನಡೆಯಿಸಿದ್ದಾನೆ. ಈ ಶೃಂಗಾರ ಪೂಜೆಯು ಶಂಕರನ ಪೂಜೆಯಾಗಿ ಪರ್ಯವಸಾನವಾಗುವ ಬಗೆಯಲ್ಲಿಂತೂ ಅತ್ಯಂತ ರಮಣೀಯತೆಯನ್ನು ಪರಿಸ್ಫುಟಗೊಳಿಸಿ ಪರಿಣಾಮವನ್ನು ಸಫಲಗೊಳಿಸಿದ್ದಾನೆ. ಮಲುಹಣನ ಪಾರ್ಥಿವ ಪ್ರಣಯವು ದೈವಭಕ್ತಿಯಾಗಿ ಪರಿವರ್ತಿತವಾಗಿದೆ. ಮಲುಹಣ ಮತ್ತು ಮಲುಹಣಿಯರ ಪ್ರಣಯಕ್ಕೆ ಮಲುಹಣಿಯ ತಾಯಿಯು ಮಧ್ಯೆ ಅಡ್ಡಿಬರುತ್ತಾಳೆ. ಅನಂತರ ಶಿವನು ಪ್ರತ್ಯಕ್ಷನಾಗುತ್ತಾನೆ. ಈ ನಾಲ್ಕು ಪಾತ್ರಗಳಿಂದಲೇ ಕವಿಯು ನಾಟಕವನ್ನಾಡಿಸಿ ಅದರತ್ತ ನಮ್ಮನ್ನು ಸಾಗಿಸಿದ್ದಾನೆ. ಹರಿಹರ ದೇವನ ವಿಚಾರವಾಗಿ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಇಂತಿದೆ :

"ಹರಿಹರನು ಹಿರಿಯ ಭಕ್ತ ಕವಿ ಮೇಲಾದ ಶಿವಕವಿ ಇವನೆಲ್ಲ ಕೃತಿಗಳಲ್ಲಿ ಭಕ್ತಿ ಪೂರ್ಣವಾದ ಭಾವನಿರ್ಭರವಾದ ಸಮಗ್ರ ವ್ಯಕ್ತಿತ್ವವೊಂದು ಎದ್ದು ಕಾಣುತ್ತದೆ. ಪಾಂಡಿತ್ಯ ಪ್ರತಿಭೆಗಳ ರೆಕ್ಕೆಗಳನ್ನು ಕೆದರಿ ಭಕ್ತಹೃದಯವನ್ನು ತೆರೆದು ದಣಿವಿಲ್ಲದೆ ಹಾಡುತ್ತ ಹಾರುವ ಹಕ್ಕಿಯಂತೆ ಇವನು ತೋರುತ್ತಾನೆ."

ಕಾವ್ಯಸಾರಭೂತವಾದ ಕಂದಪದ್ಯವೊಂದನ್ನು ಹಾಡಿದ ಮೇಲೆ ಕವಿಯು ಕಥೆಯನ್ನು ಹೇಳಲು ಆರಂಭಿಸುತ್ತಾನೆ. ಹದವನ್ನು ತಿಳಿದು ಆಯಾಯ ಸಮಯಕ್ಕೆ ಯೋಗ್ಯವಾಗುವ ವರ್ಣನೆಯನ್ನು ಕೊಡುವ ಕವಿಯ ಕೌಶಲ್ಯವು ಆದಿಯಲ್ಲಿ ವ್ಯಕ್ತವಾಗಿದೆ. ಕಾಶ್ಮೀರವು ಶ್ರೀ ವಸುಮತೀವದನ ಮುಕುರವಾಗಿದೆ. ಅಲ್ಲಿ ಶ್ರೀ ಶಾರದಾ ದೇವಿಯು ನೆಲಸಿದ್ದಾಳೆ. ಮನೋಹರ ಕಲಾವಿದರು ಕಂಗೊಳಿಸಿರುತ್ತಾರೆ. ಘನ ವಿಚಾರಗಳನ್ನು ಕೇವಲ ಕೆಲವು ನುಡಿಗಳಲ್ಲಿಯೇ ಹೃದ್ಯವಾಗಿ ಹೇಳುವ ಹದದ ಹಿರಿಮೆಯು ಹರಿಹರ ದೇವನಲ್ಲಿ ಹುದುಗಿರುವುದು ಚೆನ್ನಾಗಿ ವ್ಯಕ್ತವಾಗುತ್ತದೆ.

ಊರೂರ್ಗೆ ತೀವಿದ ತಟಾಕನಿಕರಂಗಳಿಂ<br>
ಊರೂರ್ಗೆ ಕಿಕ್ಕಿರಿದು ಕೊರ್ಬಿದ ಬನಂಗಳಿಂ<br>
ಬನದೊಳಗೆ ಸುಳಿತರ್ಪ ಕಸ್ತೂರಿಮೃಗಗಳಿಂ<br>
ಬಿನದದಿಂಪರಿತರ್ಪ ಚಮರೀಮೃಗಂಗಳಿಂ

ದೇವವಾತ್ಸ್ಯಕನದೀ ವಾತ್ಸಕದ ಬೆಳೆಗಳಿಂ
ದೇವನದಿಯುಂದದಿಂಪಿವರಿವ ನದಿಗಳಿಂ
ನಗರಿ ನಗರಿಯೊಳೆಸೆವ ದೇವಾಲಯಂಗಳಿಂ
ಮುಗಿಲನಳ್ಳಿರಿವ ಘನವಾಡಕೂಟಂಗಳಿಂ

ನಮ್ಮ ಕಣ್ಣಿನ ಮುಂದೆ ಕಾಶ್ಮೀರ ದೇಶದ ವಾತಾವರಣ ವನ್ನು ಕವಿ ತಂದು ನಿಲ್ಲಿಸುತ್ತಾನೆ. ಶಬ್ದಗಳ ಶ್ಲೇಷೆಯ ಮೂಲಕ ಅಲ್ಲಿನ ಸುಸ್ಥಿತಿಯ ಸ್ಥಾಪನೆಯನ್ನು ಮಾಡುವ ಬಗೆಯನ್ನು ಕವಿಯು ತೋರಿಸಿದ್ದಾನೆ.

ಬಂಧನಂ ಪೂಮಾಲೆಯೊಳಗಲ್ಲದಿಲ್ಲಿಲ್ಲ
ಅಂಧತ್ವವಾಕತ್ತಲೆಯೊಳಲ್ಲದಿಲ್ಲಲ್ಲ
ಕೊಯ್ವ ನುಡಿ ಕೆಯ್ಗೊಳೊಳ್ವಾನಿನಿಯರಳಕದೊಳ್
ಬಯ್ವ ನುಡಿಗಿಳಿಗಳೊಳ್ಸಲ್ಲರೊಳ್ ಸರಸದೊಳ್
ಬಡತನಂಲತೆಗಳೊಳ್ ಲಲನೆಯರ ನಡುವಿನೊಳ್
ಕೆಡಿಸುವುದುವಂಶಮಂ ಮೇದಲೊಳ್ ವೃಷಭನೊಳ್
ಅವನಿಗತಿಕಂಟಕಂ ಕೇತಕೀವೃಂದದೊಳ್
ಭುವನಕಂಟಕವೆಂಬುದಂಬುಜದನಾಳದೊಳ್
ಪೆರ್ಚುಕುಂದೆಂಬುದಾ ಚಂದ್ರನೊಳ್ ಶರಧಿಯೊಳ್

ನಾಡಿನ ಸಂತಸ ಸೌಖ್ಯವನ್ನು ವಾಚಕರಿಗೆ ಕವಿಯು ಸರಳವಾಗಿ ಸಾಂಗೋಪಾಂಗವಾಗಿ ತಿಳಿಸಿದ್ದಾನೆ. ಕಾಶ್ಮೀರ ದೇಶದಲ್ಲಿ ಭೂದೇವತೆಯ ನೊಸಲ ತಿಲಕವಾಗಿರುವ ಭಾರತೀ ಪೀಠವು ಒಂದು ನಗರ. ಪರಿಶುದ್ಧ ಸ್ಫಟಿಕದ ಕೋಟೆಯಿಂದ ಸುತ್ತುವರಿಯಲ್ಪಟ್ಟು ಶಿವಕಥನ ಮತ್ತು ಶೈವಾಗಮ ಶ್ರವಣ ಗಳಿಂದಲೂ, ಕಳಹಂಸ ಮಿಥುನಗಳು ಬಳಸಿದ ಕೊಳಗಳಿಂದಲೂ ಬಾಳೆ, ಕಿತ್ತಳೆ, ನೇರಿಳೆ, ನಿಂಬೆ ಇತ್ಯಾದಿ ಫಲಭರಿತ ತೋಟ ಗಳಿಂದಲೂ, ಅಲ್ಲಲ್ಲಿ ಶಶಿಕಾಂತ ಭವನಗಳಿಂದಲೂ, ನವ ಸೂರ್ಯ ಸೋಮ ವೀಥಿಗಳಿಂದಲೂ ಇದು ರಾರಾಜಿಸುತ್ತಿದೆ. ನಗರ ವರ್ಣನೆಯು ಸಾಂದ್ರದಾಯಕವಾಗಿದ್ದರೂ ವಿಸ್ತಾರವಿರದೆ ಕಿರಿದಾಗಿಯೇ ಇದೆ. ವೀರ ಲಕ್ಷ್ಮೀವರನೂ, ವಿವಿಧ ವಿದ್ಯಾ ಧರನೂ, ಸತ್ಕಾವ್ಯ ಕೋವಿದನೂ, ಸತ್ಯ ಸಾಹಿತ್ಯ ಗುಣ ಗಾಂಭೀರ್ಯ ವಿಸ್ತರನೂ ಆದ ಭೂಪನು ಈ ಭಾರತೀ ಪೀಠವನ್ನು ಆಳುತ್ತಿರುತ್ತಾನೆ. ಸಂಪತ್ತಿನಲ್ಲಿ ಕುಬೇರನಿಗೆ ಸರಿಸಮಾನನಾದ ಸುವರ್ಣಭಟ್ಟನೆಂಬ ವಿಪ್ರ ಅಲ್ಲಿದ್ದಾರೆ. ಕನ್ನಡ ಸಂಸ್ಕೃತಿಯ ಆದರ್ಶವನ್ನು ಈತನಲ್ಲಿ ನೋಡಬಹುದಾಗಿದೆ.

ಪೂರ್ದಿದಪೂರೆರವರ್ಗೆ ಕೋಟಿಸಂಖ್ಯೆಯ ಧನಂ
ಸಾರ್ದಶಿಷ್ಯಾವಳಿಗನಂತ ಸಂಖ್ಯೆಯ ಧನಂ
ಹೆಸರಸತ್ರಂ ಹೆಸರ ಪುರವರ್ಗವಲ್ಲಲ್ಲಿ
ಹೆಸರ ಕೆರೆಯರವಟಗೆ ಯಾರವೆಗಳಲ್ಲಲ್ಲಿ
ಹೆಸರಗ್ರಹಾರಂ ಶಿವಾಲಯಗಳಲ್ಲಲ್ಲಿ
ಹೆಸರ ಧರ್ಮಪ್ರಕರಣವೆಣಿಸಲೆನಗರಿದಲ್ಲಿ

ಈ ವಿಪ್ರನಿಗೆ ಮಲುಹಣನೆಂಬ ಮಗನು ಜನಿಸುತ್ತಾನೆ. ಪಿತನ ಕಣ್ಮಣಿಯಾಗಿ ಮಾತೆಯ ಮುದ್ದಾಗಿ, ಮಕ್ಕಳ ಮಾಣಿಕ್ಯವಾಗಿ ಈ ಮಗುವು ಬೆಳೆಯುತ್ತಿರುತ್ತದೆ. ಉಪನಯನ, ಶೈವೋಪದೇಶವು ಈತನಿಗೆ ಗುರುವಿನಿಂದ ನಡೆಯುತ್ತದೆ. ನೃತ್ಯ, ಸಂಗೀತ, ವೇದ, ಶಾಸ್ತ್ರವನ್ನು ಈತನು ಕಲಿತುಕೊಳ್ಳುತ್ತಾನೆ. ನೂರು ವರ್ಷಗಳಿಗಿಂತಲೂ ಹೆಚ್ಚಿಗೆ ಕಾಲಕ್ಕೆ ಆಗುವಂತೆ ಈತನಿಗೆ ಸುವರ್ಣಭಟ್ಟನು ಹೊನ್ನನ್ನು ಕೂಡಿಸಿಡುತ್ತಾನೆ. ಭಾಗ್ಯ ಚಕ್ರಕ್ಕೆ ತಿರುಗಣಿಯು ರೂಢಿಸಾಮಾನ್ಯವೇ ಸರಿ. ಕಾಲನ ದಾಳಿ ನಿಂದು, ರೋಗದ ದಾಳಿ ಬಂದು ಉಗ್ರ ಜ್ವರ ತಾಪದಿಂದ ಅಳ್ಕಿದ ಸುವರ್ಣಭಟ್ಟನನ್ನು ಸಾವು ಸಾವರಿಸಿ ಕೊಂಡಿತು. ಮುಂದುಗೆಟ್ಟ, ಬುದ್ಧಿಗೆಟ್ಟ ಮಲುಹಣನು ಸರ್ವ ಸಂಭ್ರಮದಿಂದ ತಂದೆಗೆ ಸಂಸ್ಕಾರಮಾಡಿ ಪಿತೃಪಿಂಡ ಕಾರ್ಯ ವನ್ನು ಮುಗಿಸುತ್ತಾನೆ. ಅಪ್ಪ ಅಳಿದಮೇಲೆ ಮಗನಿಗೆ ಬುದ್ಧಿ ಬಂತಂತೆ! ಉತ್ತಮ ವ್ಯವಹಾರ ಪರಿಣತನಾಗಿ ಇರುತ್ತಿರಲು ಮಲುಹಣನಿಗೆ ಪ್ರಾಯವು ಪ್ರಾಪ್ತವಾಗುತ್ತದೆ. ಈ ಯೌವ ನೋದಯದ ಸನ್ನಿವೇಶವನ್ನು ಕವಿಯು ಮನೋಜ್ಞವಾಗಿ ಬಣ್ಣಿಸಿದ್ದಾನೆ.

ಸವಿನುಡಿಗಳಂ ಕಿವಿಗಳಾಲಿಸಲ್ತೊಡಗಿದವು
ಅವಯವಂ ಮೃದುವಸನದಿಚ್ಛೆಯನೊಡರ್ಚಿದವು
ನೋಟವೊಪ್ಪುವ ರೂಪನೆಚ್ಚರಿಸಲೆಳಸಿದವು
ತೋಟಗೆಳಿಸುವ ಪುರ್ಬು ಗಂಟಕ್ಕತೊಡಗಿದವು
ನವಮಧುರಮಂ ಜಿಹ್ವೆಬಯಸಲನುಗೈಯಿತ್ತು
ನವಗಂಧಮಂ ಘ್ರಾಣವರಿಯಲನುಗೈಯಿತ್ತು
ಗುಡಿ ಮೆಲ್ಲಮೆಲ್ಲ ನಕ್ಷೆಗಳತ್ತ ಹೊದ್ದಿತ್ತು
ನಡೆಯುರವಣೆಯನುಳಿದು ಗಮಕದೊಳ್ಬೆರಸಿತ್ತು
ಕರತಳಂಕನುರುಚಿಯ ನೋವನುಗೈಸಿದವು
ಕರಣತತಿಭೋಗ ಸಂಪದನುನಿಚ್ಛೈಸಿದವು

ಹರೆಯದ ಮೂಲಕ ಮಲುಹಣನ ಪಂಚೇಂದ್ರಿಯ ಪ್ರೀತಿಯು ಹೆಣ್ಣಿನಾಸೆಯಾಗಿ ತಿರುಗುತ್ತದೆ.

'ಅಂಗರುಚಿ ಮುಗ್ಧೆಯರ ಕಣ್ಗೆ ಕನ್ನಡಿಯಾಗೆ'

ಹರಿಹರದೇವನ ಉತ್ತಮ ಕಲ್ಪನಾಶಕ್ತಿಗೆ ಇದು ದರ್ಪಣ ವಾಗಿದೆ. 'ಸುರಕುಜದ ಚಂದನದ ಕರ್ಪುರದ ಸಸಿಯಂತೆ, ಪರಿಮಳದ ಚಂದ್ರಿಕೆಯ ಕಾಂತಿಕರುವಿಟ್ಟಂತೆ' ಮಲುಹಣನು ಹರೆಯದವನಾಗುತ್ತಾನೆ

ಇತ್ತ ಆ ನಾಡಿನ ಕುಲದೈವ ವಿಜಯೇಶ್ವರ ಸ್ವಾಮಿಯ ಪಾತ್ರದ ವಿಲಾಸಿನಿ ಪದ್ಮಾವತಿಗೆ ಮಲುಹಣಿ ಎಂಬ ಪುತ್ರಿ ಇರುತ್ತಾಳೆ. ಸುಲಕ್ಷಣೆಯಾಗಿ, ನಾಟ್ಯವಿದ್ಯಾ ಪಾರಂಗತೆಯಾಗಿ, ರತಿಯ ಪ್ರತಿರೂಪಾಗಿ ಈಕೆ ಇರುತ್ತಾಳೆ. ಸಾಂಪ್ರದಾಯಿಕತೆ ಯಲ್ಲಿಯೂ ನೂತನ ಚಮತ್ಕೃತಿಯನ್ನು ಕಾಣುವಂತಹ ವರ್ಣನೆಯನ್ನು ಕವಿಯು ಕೊಟ್ಟಿದ್ದಾನೆ.

ಮನವನೆಡೆಗೊಂಡನಾ ಮನಸಿಜಂಪರಿತಂದು
ತನುವನೆಡೆಗೊಂಡುದಾ ಸೌಭಾಗ್ಯನೆಯ್ತಂದು
ಪ್ರೇಮದಿಂ ಮಧುರೂಪಿನೊಳ್ಪುಗಲ್ಪೂತನಂ
ಪೂಮುಡಿಯನಿಂಬುಗೊಂಡುದು ಮಕರಕೇತದಂ
ಭ್ರೂಲತೆಯನಾಶ್ರಯಿಸಿ ತಿಕ್ಪುಚಾಪಂನೋಡ
ಆಲೋಕನವನೊತ್ತುಗೊಂಡ ವಲರ್ಗಣೆನೋಡ

ಸರ್ವಾಂಗಗಳಿಗೆ ಹೋಲಿಸಿದ ವಸ್ತುಗಳು ಸಾಮಾನ್ಯ ವಾಗಿ ಸಾಂಪ್ರದಾಯಿಕವಾದರೂ ಅವುಗಳೆಲ್ಲೆಲ್ಲ ಕಾಮ, ಆತನ ಪರಿವಾರದ ವಸ್ತು ಹಾಗೂ ಜೀವಿಗಳ ಸಾಹಚರ್ಯವನ್ನು ಸಮಗ್ರ ವಾಗಿ ತಂದಿರುವಲ್ಲಿ ಕಥಾನಕದ ಔಚಿತ್ಯವಾದ ಮಲುಹಣ ಮಲುಹಣಿಯರ ಕಾಮಸೂತ್ರದ ಬಂಧನವಲ್ಲಿ ಸಾರ್ಥಕತೆ ಯನ್ನು ಹೊಂದಿವೆ. ಈಕೆಯ ತುಂಬು ಹರೆಯವು ಚೆಲುವಿನ ಹೊನಲಾಗಿದೆ.

ಅಳಿತುಡುಂಕದ ಮಘಮಘಿಪ ಬಿರಿದ ಮುಗುಳಂತೆ
ಎಳಸುವ ಚಕೋರಿ ಮೊಗನಿಡದ ಚಂದ್ರಿಕೆಯಂತೆ
ಪಿಕಚಂಚು ಸಂಚಾರವಿಲ್ಲದೆಳೆದಳಿರಂತೆ
ಶುಕಮುಖದಿ ಅಣ್ಣೆವಳಿಯದ ಪಕ್ವಫಳದಂತೆ
ತೊಳತೊಳಗಿ ಬಳೆವುತಿರ್ದಳ್ ಚಂದ್ರಕಳೆಯಂತೆ
ನಳನಳಿಸಿ ಬಳೆವುತಿರ್ದಳ್ ಕುಸುಮಶರದಂತೆ

ಈಕೆಯ ಸಕಲ ಅವಯವಗಳ ಚೆಲುವಿನ ಬಣ್ಣನೆಯಲ್ಲಿ ಶಬ್ದಗಳ ಆಯ್ಕೆ ಮತ್ತು ಶೈಲಿಯ ಸೊಬಗು ಬಹು ರಮಣೀಯ ವಾಗಿವೆ. ಮಗಳ ಸುಂದರ ರೂಪನ್ನು ನೋಡಿ ಪದ್ಮಾವತಿಯು ಸುಖರಸದಲ್ಲಿ ಮೀಯುತ್ತಾಳೆ.

ಕಡುನೇಹದಿಂ ನವಲಾಸ್ಯಮಂ ಮೈಗೊಳಿಸಿ
ವೃಡನೊಲ್ವ ರಸಗಾನಮಂ ನೆರೆಕೊರಳ್ಗೊಳಿಸಿ
ಮಗಳ ನಿಟ್ಟಿಸುತ ಕಣ್ಣೊಳಗಿಕ್ಕಿ ಮುಚ್ಚುತಿರೆ
ಮಿಗೆವಿಳಾಸಿನಿಯರಿಂ ಸಿಂಗರಿಸುತಿರುತಮಿರೆ

ದ್ವಿತೀಯ ಸ್ಥಲವಲ್ಲಿ ಪ್ರಾರಂಭದಲ್ಲಿನ ಕಂದಪದ್ಯವೊಂದನ್ನು ಬಿಟ್ಟು ಉಳಿದುದೆಲ್ಲ ಗದ್ಯದಲ್ಲಿದೆ. ಈ ಕಾವ್ಯದ ಯೋಗ್ಯತೆ ಯನ್ನು ಇದು ಅದ್ವಿತೀಯವಾಗಿ ಎತ್ತಿ ತೋರಿಸುತ್ತದೆ. ಇಂದ್ರಿಯ ವೇದ್ಯವಾದ ವರ್ಣನೆಗಳ ಸೊಗಸು ಇಲ್ಲಿ ಸೂರೆ ಯಾಗಿವೆ. ಈಗ ಎಲ್ಲವೂ ಮಲುಹಣಿಗೆ ಹೊಚ್ಚ ಹೊಸದು.

ಹೊಸನಡೆ ಹೊಸನುಡಿ ಹೊಸಮುಡಿ
ಹೊಸಹೊಸ ಸೌಭಾಗ್ಯವೆಸೆವ ಹೊಸಲಾವಣ್ಯಂ
ಹೊಸಹರೆಯಂ ಹೊಸನೋಟಂ
ಹೊಸಜವ್ವನದೇಳ್ಗೆ ಮಲುಹಣಿಗೆ ಚಿತ್ರತರಂ

ಒಂದು ದಿವಸ ಪದ್ಮಾವತಿಯು ಮಲುಹಣಿಯನ್ನು ಸಕಲಾಲಂಕೃತೆಯನ್ನಾಗಿ ಮಾಡಿಕೊಂಡು ಸಖಿಯರ ಸಂಗಡ ವಿಜಯೇಶ್ವರ ದೇವಸ್ಥಾನಕ್ಕೆ ಕರೆತರುತ್ತಾಳೆ. ಮಲುಹಣಿಯ ಅಲಂಕಾರ ವೈಭವದಂತೆಯೇ ಇಲ್ಲಿನ ಶೈಲಿಯ ಸೊಗಸೂ ಸಹ ಇನ್ನೂ ರಮಣೀಯವಾಗಿದೆ.

"ಚಕ್ರಮಿಥುನಕ್ಕೆ ಗನಸಣಿಗೆಯನಿಕ್ಕುವಂತೆ ಕುಚ ಯುಗಕ್ಕೆ ಕಂಚುಕೆಯಂ ತೊಡಿಸಿ ತೋರಮುತ್ತಿನ ಹಾರಮಂ ಹತ್ತೆಸಾರ್ಚಿ ಶಶಿಬಿಂಬಕ್ಕೆ ಶುಕ್ರನಂ ಸೇರಿಸುವಂತೆ ಮುಖಬಿಂಬ ದೊಳ್ ಮುತ್ತಿನ ಮೂಕುತಿಯಂ ಮೇಳೈಸಿ ಕಾವನಂಬಂ ಕಸ್ತುರಿಯ ಸಾಣೆಯಿಕ್ಕುವಂತೆ ಕಜ್ಜಳಮನೆಚ್ಚಿ ಎಳೆಲತೆಯುಂ ಬೆಳ್ಪಿಂಗಳಂಬಾಸಣಿಸುವಂತೆ ನವಮಕೂಲಮಂ ನಿರಿವಿಡಿದುಡಿಸಿ"

ದೇವಸ್ಥಾನಕ್ಕೆ ಸಖೀಜನ ಸಹಿತಳಾಗಿ ಅಲಂಕೃತ ಮಲುಹಣಿ ಬರುವಾಗ "ಮಲುಹಣಿಯ ಮೆರೆಗೊಂಡು ಕರ್ಬಿನ ಬಿಲ್ಲಗೊಲೆಗೇರಿಸುತ್ತ ಎಲರಂಬಂ ನಡೆತರೆ...........ತುಂಬಿಗಳ ಝೇಂಕಾರಂ ಕಂಕಣದ ಝಣತ್ಕಾರಂ ನೂಪುರದ ಕೇಂಕಾರಮಂ ಪಾದಮುದ್ರಿಕೆಯ ಠಣತ್ಕಾರಂ ಮದನನ ಬಿಲ್ಲ ಟೇಂಕಾರಂ ಬೆರಸಿ ಬೆಳೆದು ಪುರಜನರ ಕಿವಿಗಳ್ಗೆ ಹೊಸಸವಿ ಗಳಂ ಸಾಲಿಡೆ" ಇಲ್ಲಿ ಪಂಚೇಂದ್ರಿಯ ಪ್ರೀತಿಯನ್ನು ಉಂಟು ಮಾಡುವ ಕವಿಯ ವರ್ಣನಾ ಸಾಮರ್ಥ್ಯದ ಕಿವಿಕಣ್ಣುಗಳ ಆಕರ್ಷಣೆಯು ಪರಿಸ್ಫುಟವಾಗಿದೆ.

ಮಲುಹಣನು ಮೊದಲಿನಿಂದಲೂ ಪರಮ ಶಿವಭಕ್ತ. ವಿಜಯೇಶ್ವರನಿಗೆ ನಿತ್ಯ ನೇಮದ ಪೂಜಾದಿಗಳನ್ನು ಮಾಡು ತ್ತಿರುವ ಈತನು ಭಕ್ತಿಯಲ್ಲಿ ಯಾರಿಗೂ ಕಡಿಮೆಯಿರಲಿಲ್ಲ. ಈ ಬಗೆಯ ಮಲುಹಣನು ನಿತ್ಯ ನಿಯಮದಂತೆ ಸ್ನಾನಾದಿ ಗಳನ್ನು ಮುಗಿಸಿಕೊಂಡು, ಮಡಿಯನ್ನುಟ್ಟು ಜೊತೆಗಾರರ ಜೊತೆಯಲ್ಲಿ ದೇವಸ್ಥಾನಕ್ಕೆ ಪೂಜೆಗಾಗಿ ಬರುತ್ತಾನೆ. ದೇವರ ಪೂಜೆಯು ಮುಗಿದಮೇಲೆ ಮುಂದಣ ರಂಗಮಂಟಪದ ಮಧ್ಯೆ ನರ್ತನವನ್ನು ನೋಡಲು ಬಂದಿದ್ದ ಮಂದಿಯನ್ನು ಮಲುಹಣನು ನೋಡುತ್ತಾನೆ. ವಿವಾಹ ಮುಹೂರ್ತದ ತೆರೆ ಸರಿಯುವಂತೆ ಆಗ ಮಲುಹಣ ನೋಡೆ ಜವನಿಕೆಯೋಡುತ್ತದೆ. ನರ್ತಕಿಯಾಗಿ ಬಂದಿದ್ದ ಮಲುಹಣಿಯ ದೃಷ್ಟಿಯೂ, ಮಲುಹಣನ ದೃಷ್ಟಿಯೂ ಪರಸ್ಪರ ನೆಟ್ಟು ಉಭಯರೂ ಮೋಹಪರವಶರಾಗುತ್ತಾರೆ. ರಂಗಮಂಟಪವು ವಿರಹ ಮಂಟಪ ವಾಗುತ್ತದೆ, ಈಶ್ವರಕೇಳಿ ರತೀಶ್ವರ ಕೇಳಿಯಾಗುತ್ತದೆ. ತತ್ಫಲ ಧನಿಕನಾದ ಈತನು ಮಲುಹಣಿಯ ಸೆಜ್ಜೆಮನೆಯನ್ನು ಸೇರುತ್ತಾನೆ. ಸಾಮಾನ್ಯವಾಗಿ ಕನ್ನಡ ಕವಿಗಳು ದಾಂಪತ್ಯದ ಚಿತ್ರಣದಲ್ಲಿಯೂ ಎಲ್ಲೆಮೀರುವುದು ಕಾಣಬರುತ್ತದೆ. ಇಲ್ಲಿನ ವಿಲಾಸದ ಚಿತ್ರಣದಲ್ಲಿ ಇವರಿಬ್ಬರ ಮೇರೆ ಮೀರಿದ ಶೃಂಗಾರದ ಆನಂದವನ್ನು ಚಿತ್ರಿಸುವಲ್ಲಿ ಎಲ್ಲೆಮೀರದೆ, ಕ್ರಿಯೆಯನ್ನು ಭಾವವಾಗಿ ರೂಪುಗೊಳಿಸಿ, ಭಾವವನ್ನು ಗಮ್ಯಮಾಡುವಲ್ಲಿ ಹಲವು ರಮ್ಯ ರೂಪಕಗಳನ್ನು ಬಳಿಸಿ ರಸಮಯವಾದ ಶೃಂಗಾರ ಚಿತ್ರಣವನ್ನು ನೀಡುವಲ್ಲಿ ನಿಜವಾದ ಮಹಾಕವಿಯ ಸಾಮರ್ಥ್ಯ

ವನ್ನು ಹರಿಹರನು ವ್ಯಕ್ತಪಡಿಸಿದ್ದಾನೆ.

"ನೋಟವರಿದಪ್ಪುವ ಸೈರಣೆಯರಿದು ಸೋಂಕುವ ಆಸೆಯರಿದಾಲಂಗಿಸುವ ಬಯಕೆಯರಿದು ಬೆರೆಸುವ ಮನವರಿದನುಭವಿಸುವ ಇಚ್ಛೆಯರಿದು ಹೆಚ್ಚುವ ಅಗ್ಗಳಿಕೆಯರಿದು ಬೋಳೈಸುವ ಎಚ್ಚರಿಕೆಯ ಸಮರತಿಯೊಳಿರ್ದು ಹಿಗ್ಗಿ ಸುಖದ ಸೋಂಕುಮಿಕ್ಕು ಮೀರಿನಲಿವು ತಲೆಗೆತ್ತಿ ನಖಮುಖದಿಂ ಸೋಂಕಿಸೆಳೆಯ ಲನುಗೆಯ್ವಲ್ಲಿಂ ಮುನ್ನಂ ರೋಮಾಂಚವ ಬಾಸುಳೆಪ್ಪ ಸುಕುಮಾರಾಂಗಿಯೊಳೊಲ್ದು ನೆರೆವ ಸುಖಸಮಯದೊಳ್ಕರುಣವೆಲ್ಲಂ ನೋಟ ನೋಟವೆಲ್ಲಂ ನುಡಿನುಡಿಯೆಲ್ಲಂ ವಿರಹ ವಿರಹವೆಲ್ಲಂ ದೈನ್ಯ ದೈನ್ಯವೆಲ್ಲಂ ಸಾತ್ವಿಕಂ ಸಾತ್ವಿಕವೆಲ್ಲಂ ಮೆಯ್ ಮೆಯ್ಯೆಲ್ಲಂ ಕೂಟಂ ಕೂಟವೆಲ್ಲಂ ಮನಂ ಮನವೆಲ್ಲಂ ಮೆಚ್ಚು ಮೆಚ್ಚೆಲ್ಲಂ ಸೋಲುಸೋಲವೆಲ್ಲಂ ರಸಮಯವಾಗಿ" ಅಲ್ಲಿ ಮಲುಹಣ ಮಲುಹಣಿಯರಿಬ್ಬರೂ ರತಿಸುಖವನ್ನು ಅನುಭವಿಸುತ್ತಾರೆ. ಎಷ್ಟು ದಿವಸಗಳಾದರೂ ಇಬ್ಬರಿಗೂ ತೃಪ್ತಿಯೇ ಆಗುವುದಿಲ್ಲ. ಸುವರ್ಣಭಟ್ಟನು ನೂರು ವರ್ಷಗಳಿಗೊಂದು ಕೂಡಿಸಿಟ್ಟ ಹೊನ್ನು ಕೆಲವು ದಿನಗಳಲ್ಲಿಯೇ ಸವೆದುಹೋಗುತ್ತದೆ. ಮಲುಹಣನಿಗೆ ಮಾತ್ರ ಮಲುಹಣಿಯ ಆಸೆಯು ತೀರುವುದಿಲ್ಲ. ಮುಡಿದ ಹೂವಗಲ್ದೊಡಂ ಹಿಡಿದ ಪರಿಮಳವಗಲದಿರ್ಪಂತೆ ಮೋಹರಸವಾರದೆ ಮಲುಹಣ ಮಲುಹಣಿ ಪರಮಾನುರಾಗದೊಳಗಲದಿರೆ ಮಲುಹಣನ ಧನವೆಲ್ಲ ವ್ಯಯವಾಗುತ್ತದೆ. ಅರ್ಥದ ಸವಿಗೆ ಮನಮುಂ ನಾಲಿಗೆಯುಂ ಲವಲವಿಸಿ ಮಿಕ್ಕು ಮೀರಿದ ರಕ್ಕಸಗುಂಟಣಿ ಪದ್ಮಾವತಿಯು ದುರಾಲೋಚನೆ ಮಾಡುತ್ತಾಳೆ. "ಚೂತ ಮನಪ್ಪಿದ ಮಲ್ಲಿಕಾಲತೆಯನಗಲ್ಚುವ ಬಿರುಗಾಳಿಯಂತೆ ಭೇರುಂಡಪಕ್ಕಿಯ ನಡುವಂ ಸೀಳಲೊಯ್ವ ಲುಬ್ಧಕನಂತೆ ಮಗಳನಗಲ್ಚಲ್ ಬಗೆದು." ಪ್ರಣಯಿಗಳ ಜೊತೆಯ ಗಾಢತೆಗಾಗಿ ಇಲ್ಲಿ ಭೇರುಂಡಪಕ್ಕಿಯ ಹೋಲಿಕೆಯನ್ನು ಕೊಟ್ಟಿರುವುದು ಸಹಜತೆಗೆ ಸಾಕ್ಷಿಯಾಗಿದೆ. ನಿನ್ನ ಮಾವನು ವಸ್ತ್ರಾಭರಣವನ್ನು ತಂದಿದ್ದಾನೆ ಬಾ ಎಂದು ತಾಯಿ ಹೇಳಿಕಳುಹಿಸಿ ಗಂಡನಿಂದ ಮಗಳನ್ನು ಅಗಲಿಸಲು ಮನಃಪ್ರಿಯರಹಿತಳಾದ ಮಗಳು ನೊಸಲ ಕಣ್ಣ ಹೊಗೆಸುತ್ತಿದೆ ಪೂಸಿರದಂತೆ ಕೆಳದಿಯರ ಕೆಯ್ಯೊಳ್ಕೆಯ್ಯ ನೀಡಾಡೆ ಮೆಲ್ಲಮೆಲ್ಲನೆ ಬಂದು ತಾಯಿಯನ್ನು ನೋಡುತ್ತಾಳೆ. ಹಣ ಮುಗಿಯಿತು; ಹರೆಯದ ಹೊಗರು ಹರಿಯಿತು. ಮಲುಹಣನ ಸಹವಾಸವನ್ನು ಬಿಡು ಎಂದ ತಾಯಿಯನ್ನು ಮಲುಹಣಿಯು ಲೋಭೆ ಮುಂತಾಗಿ ಹುಟ್ಟಿದ.ದೀನೆ ಮುಂತಾಗಿ ಹುಟ್ಟಿದ ನೀರಸೆ ಸುಖಮುಂ ಕೊಯ್ವ ಮಾನಸಗರಗಸವೆ ಆಗಿ ಇರಿಸುತ್ತಾಳೆ. ಮಗಳ ಮೋಹದ ಫಲಿತವಾಗಿ ಕ್ರಮಕ್ರಮವಾಗಿ ಕೊಂಚಕೊಂಚಕಾಲ ಮಗಳನ್ನು ಅಗಲಿಸುವ ಅಭ್ಯಾಸವನ್ನು ಮಾಡಿಸುತ್ತಾಳೆ. ಆಗಾಗ್ಗೆ ಮಲುಹಣನನ್ನು ಸಜ್ಜೆಯೊಳು ಮೊದಲಿಸಿ, ಕುಳ್ಳಿರ್ದ ಕಡೆ ಕುಸುರಿದರಿದು ನಿಂದಿರ್ದೆಡೆಯೊಳು ನೀರನ್ನು ಚೆಲ್ಲುತ್ತಾಳೆ. ಮನೆಯ ಮುಂದೆ ಸುಳಿವ ಶ್ರೀಮಂತ ತರುಣರ ಉಡುಗೆ ತೊಡುಗೆಯನ್ನು ನೋಡಿ ಸಹಿಸಲಾರದೆ ಅವುಡುಕಚ್ಚಿ ನಿಷ್ಕಾರಣ ವಿಲಾಸಿನಿಯರನ್ನು ಬಡಿದು ಪದ್ಮಾವತಿಯು ಕಾಲ್ಗಳವನ್ನು ತೆಗೆಯುತ್ತಾಳೆ. ಬೇನೆ ಇಲ್ಲದೆ ನರಳ್ದು ಸಾವಿಲ್ಲದೆ ಶೋಕಂಗೆಯ್ದು ಮಲುಹಣನನ್ನು ಮನೆಯಿಂದ ಹೊರದೂಡುತ್ತಾಳೆ. ಮಲುಹಣಿಯೂ ಸಹ ಮನದಲ್ಲಿಯೇ ಮಮ್ಮಲ ಮರಗುತ್ತಾಳೆ. ವಿರಹವೇದನೆಯಿಂದ ಬೇಯುತ್ತಿರುತ್ತಾಳೆ; ಆದರೆ ತಾಯಿ ಕೈಕೆಳಗಿನ ಆಕೆ ಮಾಡುವುದು ತಾನೆ ಏನಿದೆ?

ತೃತೀಯ ಸ್ಥಲದಲ್ಲಿ ಮಲುಹಣನ ವಿರಹತಾಪದ ವರ್ಣನೆಗೆ ಹೆಚ್ಚಿನ ಸ್ಥಾನವಿದೆ. ಕನ್ನಡ ಮಹಾಕಾವ್ಯಗಳಲ್ಲಿ ವಿರಹ ವರ್ಣನೆ ಬಿಡಲಾರದ ಕರ್ಮವಾಗಿ ಬಹುವೆಡೆ ಸಾಂಪ್ರದಾಯಿಕವಾಗಿ ಬಂದಿವೆ. ಹರಿಹರನಲ್ಲಿ ಅಕ್ಕಮಹಾದೇವಿಯ ಆತ್ಮದ ವಿರಹ, ಬಸವಣ್ಣನ ಭಕ್ತಿಯ ವಿರಹ ಇವುಗಳ ಜೊತೆಗೆ ನಿಲ್ಲಬಲ್ಲ ಸನ್ನಿವೇಶವು ಇದೊಂದೇ ಎಂಬ ಮನವರಿಕೆಯಾಗದೆ ಇರದು. ವರ್ಣನಾಶಕ್ತಿಗೆ ಮಲುಹಣನ ರಗಳೆ ಉತ್ತಮ ಉದಾಹರಣೆಯಾಗಿದೆ ಎಂದು ಶ್ರೀಯುತ ಫ.ಗು.ಹಳಕಟ್ಟಿಯವರು ಹೇಳಿದ್ದು ಸಾರ್ಥಕವಾಗಿದೆ. ಹೊರಟು ಹೋಗಲಾರದೆ ಮನೆಯ ಮುಂದೆಯೇ ಮಲುಹಣನು ಮರುಗಿ ತಾಪಿಸುತ್ತ ಹುಚ್ಚನಂತಾಗಿ ಹಂಬಲಿಸುತ್ತಿರುತ್ತಾನೆ.

ನಿಂದರಂ ಕಂಡು ಮಲುಹಣಿ ಎನುತೆ ಸೋಂಕುವಂ<br>
ಬಂದರಂ ಕಂಡು ಮಲುಹಣಿ ಎನ್ನುತಪ್ಪುವಂ<br>
ಕಮಳಮಂ ಮಲುಹಣಿಯ ಮೊಗವೆಂದು ಮುಟ್ಟುವಂ<br>
ಕುಮುದಮಂ ಕಣ್ಗಳೆಂದಕ್ಷಿಯೊಳಗೊತ್ತುವಂ

ಅಭಿನವ ಪಂಪನ ಕಾವ್ಯಾರಾಮದಲ್ಲಿ ಶ್ರೀ ರಾಮನ ಆಲಾಪವೂ ಒಂದು ಬಗೆಗೆ ಸೇರಿರುತ್ತದೆ. ದಾರಿದಾರಿಗಳಲ್ಲಿ ಬೀದಿಬೀದಿಗಳಲ್ಲಿ ಮಲುಹಣಿಯ ಕಳವಳದಿಂದ ತಳಮಳಿಸಿ ಕೊನೆಗೆ ಮಲುಹಣಿಯ ಮನೆಯ ಮುಂದಣ ಎಂಜಲು ಚೆಲ್ಲುವ ಒಂದು ಹೊಸಕುಳಿಯೊಳಗೆ ನಿಂತು ಮಲುಹಣಿಯ ಧ್ಯಾನವನ್ನೇ ಮಾಡುತ್ತಿರುತ್ತಾನೆ. ಆಗ ಮಲುಹಣಿಯು ಊಟ ಮಾಡಿದ ಹರಿಯಾಣವನ್ನು ದಾಸಿಯೊಬ್ಬಳು ತೊಳೆದು ಮಲುಹಣನ ಮೇಲೆ ಆ ನೀರನ್ನು ಚೆಲ್ಲಲು 'ಹಾ ಮಲುಹಣೀ ಮಲುಹಣೀ' ಎಂದು ಮಲುಹಣನು ಒರಲುತ್ತಾನೆ ಈ ಕೂಗನ್ನು ಕೇಳಿದ ಮಲುಹಣಿಯು ಓಡಿಬಂದು ಸಂತೈಸಿ ಹೊರಟುಹೋಗುವಂತೆ ಹೇಳಿ ತನ್ನಯ ಸಜ್ಜೆ ಮನೆಗೆ ಹೋಗುತ್ತಾಳೆ; ಆದರೆ ಭ್ರಾಂತಿ

ಪಟ್ಟ ಮಲುಹಣನು ಆ ಇರುಳೆಲ್ಲಾ ಅಲ್ಲಿಯೇ ನಿಂತಿರಲು ಹಿಮವು ರಾಶಿ ರಾಶಿಯಾಗಿ ಬಿದ್ದು ಆತನನ್ನು ಪೂರ್ತಿಯಾಗಿ ಮುಚ್ಚಿತು. ವಿರಹದ ಉರಿಯಿಂದ ದಹಿಸುತ್ತಲಿದ್ದ ಆತನಿಗೆ ಅದೇ ಶಿಶಿರೋಪಚಾರವಾದಂತಾಯಿತು

ಎಳೆಯ ಬೆಳ್ನಗಿಲೊಳಗೆ ಹೊಳೆವ ಪಾವಕನಂತೆ
ಹೊಳೆವಾಲಿ ಕಲ್ಲಮನೆಯೊಳಗಿರ್ಪ ರವಿಯಂತೆ
ದಿಟ್ಟಿಸಲ್ ಕಣ್ಮುಚ್ಚಿ ಹೊಯ್ವ ಶೀತದ ನಡುವ
ಮುಟ್ಟಿದೊಡೆ ಕೈ ಕಡಿದು ಬೀಳ್ವ ತುಹಿನದ ನಡುವೆ
ನೆನೆದೊಡೆ ಮನ ಮುರುಟುವ ಶೀತಳದ ನಡುವೆ
ತನುಕರಗಿ ಕೋಡಿಸುವ ಬಹಳ ಶೀತಳದ ನಡುವೆ

ಪದ್ಮಾಪತಿಯಿಂದ ಆಗಬಾರದ ಅಪಮಾನಗಳು ಆದರೂ ಅದನ್ನೆಲ್ಲ ಸಹಿಸಿಕೊಂಡು ಸಾಗುತ್ತಿರುವ ಮಲುಹಣನ ಏಕ ನಿಷ್ಠ ಪ್ರೇಮ, ಕಷ್ಟ ಸಹಿಷ್ಣುತೆಯು ಗೊತ್ತಾಗುತ್ತದೆ. ಮಂಜಿನಿಂದಾವೃತವಾಗಿ ಯಾವುದರ ಜ್ಞಾನವೂ ಇಲ್ಲದಿರುವ ಮಲುಹಣನನ್ನು ಬೆಳಗಿನ ಸಮಯದಲ್ಲಿ ಬಂದು ಮಲುಹಣೆಯು ನೋಡುತ್ತಾಳೆ, ಪ್ರಲಾಪಿಸುತ್ತಾಳೆ.

ಅಕಟಕಟ ಮಲುಹಣಂ ಹಿಮದೊಳ್ಮುರುಟಿದಂ
ಅಕಟಕಟ ಪಾಪಿ ಎನಗೊಲ್ದು ನೆರೆಮುಗ್ಗಿದಂ
ಪಾಪಿಯಾದೆಂ ಪಾಪಿಯಾದೆಂ

ಹಿಮವನ್ನು ಮಲುಹಣೆಯು ಮರವುಟ್ಟಿನಿಂದ ತೆಗೆಯಿಸಿದಳು.

ಕಪಟವಳಿದೊಳಗೊಪ್ಪುವನುರಾಗವಿರ್ಪಂತ
ಯುಪಚಾರವಳಿದು ಸತ್ಯ ಸ್ನೇಹವಿರ್ಪಂತೆ
ಇರ್ದನಾ ಮಲುಹಣಂ ವಿರಹಕೆ ತಂಪಾಗಿ
ಇರ್ದನಾ ಮಲುಹಣಂ ತಾಪಕ್ಕೆ ತೆರಹಾಗಿ

ಮಲುಹಣೆಯ ಉಪಚಾರವು ಉದಾತ್ತ ಪ್ರೇಮದ ನೆನಪನ್ನು ತರುತ್ತದೆ. "ಅದ್ವೈತಂ ಸುಖ-ದುಃಖಯೋರನುಗತಂ ಸರ್ವಸ್ವಾವಸ್ಥಾಸು" ಎಂದು ಹೇಳಿರುವುದು ಸಮಂಜಸವಾಗಿ ಕಾಣುತ್ತದೆ. ಪ್ರಿಯಾರಾಧನೆಯ ರೀತಿಯನ್ನು ಹರಿಹರನು ಹೃದ್ಯವಾಗಿ ಚಿತ್ರಿಸಿದ್ದಾನೆ.

ಮಲುಹಣನನಕ್ಕರಿಂ ಕರುಣದಿಂದಂ ನೋಡಿ
ಮಲುಹಣೆ ಮನೋದುಃಖದಿಂದೆ ನುಡಿದಳ್ಬಾಡಿ
ಎನ್ನಮೇಲಿಕ್ಕ ವಿಚಿತ್ರದಾತುರತೆಯಂ
ಪನ್ನಗಾಭರಣ ನೊಳ್ಮಾಳ್ಪುದೆನ್ನೊಲ್ಮೆಯಂ
ಎಂದ ಮಾತಂ ಕೇಳ್ದು ಬಳಿಕ ನೀನೆನಗಪ್ಪೆ
ಇಂದುಧರನಂ ಬೇಡು ನಿನ್ನತ್ತ ನಾಂ ಬಪ್ಪೆ
ಎನ್ನ ಹವಣೇ ಕೋಟಿ ಮಲುಹಣೆಯರಾಗರೇ
ಮನಸಿ ಜಾರಿಯನರಿದು ದುಃಖಮಂ ನೀಗರೇ
ಬೇಡಿಕೊಳ್ಳೀಶ್ವರರನೊಳಿನ್ನ ಮಲುಹಣ ಪೋಗು
ನೋಡಬಾರದು ವಿರಹದನುತಾಪಮಂನೀಗು.

ಪ್ರಿಯೆಯ ಉಪದೇಶವೇ ಆರಾಧನೆಯಾಗಿ ಬೆಳಗುತ್ತಿದೆ. ತನ್ನಂತಹವಳಿಗಾಗಿ ಇಷ್ಟು ಕಷ್ಟವನ್ನು ಸಹಿಸಿದವನು ಪರಮೇಶ್ವರನನ್ನು ಇಷ್ಟೇ ನಿಷ್ಠೆಯಿಂದ ಪ್ರೀತಿಸಿದ್ದರೆ ದೊರಕುವ ಫಲವು ಹಿರಿದಾದದ್ದು ಎಂದು ಆಕೆಯ ಬುದ್ಧಿಗೆ ಮಿಂಚು ಹೊಳೆದಂತಾಗುತ್ತದೆ. ಈ ಬಗೆಯ ಏಕನಿಷ್ಠೆಗೆ ಪರಮೇಶ್ವರನೊಬ್ಬನೇ ಪಾತ್ರನು ಎಂಬ ಭಾವನೆಯು ಬೇರೂರಿದೆ. ಕಾಮವು ಪ್ರೇಮವಾಗಿ ಮಾರ್ಪಟ್ಟಾಗ ಕಾಮ ವಿಕಾರಕೆ ಪ್ರೇಮ ಸಂಸ್ಕಾರವು ಒದಗಿವಾಗ ಬರುವ ಮಾತುಗಳು ಇವು. ಕುರುಡು ಕುರುಡಾಗಿ ಕಾಮದ ಆಶೆಗೆ ತುತ್ತಾಗಿರುವ ನಾಯಿ ಜೀವಿಯಂತಹ ಮಲುಹಣನು ಅಮೂಲ್ಯವಾದ ಮನುಷ್ಯ ಜೀವನವನ್ನೇ ಹಾಳುಮಾಡುವನಲ್ಲಾ ಎಂಬ ಅನುಕಂಪ ಸಹಾನುಭೂತಿಯು ಮಲುಹಣೆಯಲ್ಲಿ ಜನಿಸಿ, ಹೃದಯದ ಬೆ[illegible]ಕನ್ನು ಚೆಲ್ಲಲು ಯತ್ನಿಸುತ್ತಾಳೆ. ಕಾಮುಕನು ಪ್ರೀತಿಯ ಭಕ್ತನಾಗುತ್ತಾನೆ.

...ವಿರಹಮುಂ ತೆಗೆದು ಹರನ ಮೇಲಿಕ್ಕಿದಂ
ತನಿನೇಹಮುಂ ಶಿವನ ಮೆಲ್ಲಡಿಗೆ ಸಾರ್ಚಿದಂ

ವಿಜಯೇಶ್ವರನ ರಂಗಮಂಟಪಕ್ಕೆ ಬಂದು ಮಲುಹಣನು ಧ್ಯಾನಾಸಕ್ತನಾಗುತ್ತಾನೆ. ಮಲುಹಣೆಯ ಪ್ರೇಮವನ್ನು ಬಿಡದೆ ತನ್ನ ಸಹಚರಿಯ ಸಂಗಡ ಪರಮೇಶ್ವರನ ಸಾಹಚರ್ಯ ಮಾಡಬೇಕೆನ್ನುವ ಧ್ಯೇಯವನ್ನಿಟ್ಟುಕೊಂಡು ಆರಾಧಿಸುವ ಪರಿಸ್ಪಷ್ಟ ಚಿತ್ರವನ್ನು ಕವಿಯು ಕೊಟ್ಟಿದ್ದಾನೆ.

ದೇವ ಶಂಕರ ಭಕ್ತಜನ ಮನೋರಥರೂಪ
ದೇವ ಶಶಿಧರ ಶರಣ ಹೃದಯ ಪದಮಳದೀಪ
ಗೌರೀಕಚ ಪ್ರಚಯ ಪುಷ್ಪಗಂಧಕ್ಕೆಳಸಿ
ಭೋರೆನುತೆರಗಿ ಮಧುಕರ ವ್ರಜಮನನುಕರಿಸಿ
ಮೆರೆವ ಗರಳದಗರುವ ಕರುಣಿಪುದು ಕರುಣಿಪುದು
ಹರೆಯ ಮಧುರಾಂಶ ಮಂಡಿತ ಮಕುಟ ಕರುಣಿಪುದು
ಗಿರಿಜಾ ಮನೋಹರನೆ ಕರುಣಿಪುದು ಕರುಣಿಪುದು

ಭಕ್ತನಾದ ಮಲುಹಣನ ಮನೋರಥವು ಮಲುಹಣೆ. ಆಕೆಯ ರೂಪದಲ್ಲಿಯೇ ಶಂಕರನನ್ನು ಕಾಣುವೆನೆಂಬ ಧ್ವನಿ ಬಹಳ ಚೆನ್ನಾಗಿದೆ. ಗಿರಿಜೆಯು ತಲೆಯನ್ನು ಶಿರದ ಸಮೀಪದಲ್ಲಿ ಇರಿಸಿ ಆಕೆಯ ಹೂಮುಡಿಯ ಆಮೋದವನ್ನು ಸಂತಸದಿಂದ ಸವಿದ ಮಧುರ ಚಿತ್ರದ ನೆನೆಪು ಈ ಸಮಯದಲ್ಲಿ ಶಂಕರನಿಗಾಗುವಂತೆ ತಂದಿರುವುದು ಗೌರೀ ಪ್ರೇಮದ ಸೂಚನೆಯಿಂದ ತನ್ನ ಮಲುಹಣೆಯ ಪುನರ್ಮಿಲನದ ಸೂಚನೆಯನ್ನು ಸೂಕ್ಷ್ಮವಾಗಿ ಕವಿಯು ಇರಿಸಿದ್ದಾನೆ. ಶಂಕರನು ಭಕ್ತನ ಭಕ್ತಿಗೆ ಮೆಚ್ಚಿ ಮಹಾಲಿಂಗದಿಂದ ಹೊರಬಂದು ವರವನ್ನು ಕೇಳೆಂದು ಹೇಳುತ್ತಾನೆ. ಮಲುಹಣನು ಸಂತೋಷದಿಂದ ಪರಶಿವನ

ಪಾದಕ್ಕೆರಗಿ ಮಲುಹಣಿಯ ಜೊತೆಯಲ್ಲಿ ಇನ್ನೂ ನೂರು ವರ್ಷಕಾಲ ಇರುವೆ ಎಂದೂ ಅನಂತರ ಕೈಲಾಸಕ್ಕೆ ಕರೆಯೊಯ್ಯ ಬೇಕೆಂದು ಕೇಳಿಕೊಳ್ಳುತ್ತಾನೆ. 'ತಥಾಸ್ತು' ಎಂದು ಶಂಕರನು ಅಂತರ್ಧಾನನಾಗುತ್ತಾನೆ. ಪದ್ಮಾವತಿಯು ಶಿವಲಿಂಗದ ಸಮಕ್ಷ ದಲ್ಲಿ ಮಗಳಾದ ಮಲುಹಣಿಯನ್ನು ಮಲುಹಣನಿಗೆ ಸಮರ್ಪಿಸುತ್ತಾಳೆ. ಮಲುಹಣನು ಮಲುಹಣಿಯರು ಪರ ಶಿವನ ಪೌರೋಹಿತ್ಯದಲ್ಲಿ ಮದುವೆಯಾಗಿ ಗಂಡ ಹೆಂಡಿರಾದು ದಕ್ಕೆ ರಾಜ ಪ್ರವರಸೇನನು ಸಮ್ಮತಿಸುತ್ತಾನೆ. ಮಲುಹಣನು ಸಕಲೈಶ್ವರ್ಯ ಸಂಪನ್ನನಾಗಿ ಇನ್ನೂ ನೂರು ವರ್ಷಕಾಲ ಮಲು ಹಣಿಯ ಜೊತೆಯಲ್ಲಿ ಸಂತೋಷದಿಂದ ಬಾಳಿಕೊಂಡಿದ್ದು ಕೊನೆಗೆ ಪುಷ್ಪಕ ವಿಮಾನದಲ್ಲಿ ಮಲುಹಣಿಯ ಜೊತೆಯಲ್ಲಿ ಕೈಲಾಸಕ್ಕೆ ತೆರಳುತ್ತಾನೆ. ಅಲ್ಲಿ ಪರಮೇಶ್ವರನು ಮಲುಹಣನ ಗುಣಗಳನ್ನು ಹೊಗಳಿ 'ತನ್ನ ವಿರಹವನೆನ್ನ ಮೇಲಿಟ್ಟರಿಂ ತುಂಟೆ ?' ಎಂದು ಹೇಳಿ ಪಾರ್ವತಿಗೆ ತೋರಿಸಿ ಹರುಷದಿಂದ ಮಲುಹಣನಿಗೆ ಗಣಪದವಿಯನ್ನೂ, ಮಲುಹಣಿಗೆ ರುದ್ರ ಕನ್ನಿ ಕೆಯ ಸ್ಥಾನವನ್ನೂ ಕರುಣಿಸುತ್ತಾನೆ. ಕಾಮುಕನು ಪ್ರೀತಿಯ ಭಕ್ತನಾಗಿ, ಭಕ್ತನು ಮೋಕ್ಷ ಕೈವಲ್ಯಧರನಾಗಿ ಇರುವುದನ್ನು ಮಲುಹಣನ ಮೂಲಕ ಕವಿಯು ವ್ಯಕ್ತಪಡಿಸಿದ್ದಾನೆ. ಮನು ಷ್ಯನು ಸಹಜವಾದ ಕಾಮುಕ್ಕೆ ತುತ್ತಾಗಿ ಬಹು ಸಂಕಟಪಟ್ಟು ತಪೋನಿಷ್ಠೆಯಿಂದ ಆ ಕಷ್ಟ ಕರಗಿ ಸುಖವು ಸಿಕ್ಕುವುದರಲ್ಲಿ ಯಾವ ಸಂಶಯವೂ ಇಲ್ಲ. ಕಾಮದ ಕಾಳಿಕೆಯು ಕಳೆದು ದಿವ್ಯ ಪ್ರೇಮೋದಯವಾಗುವ ಸಂಭವವು ಕಣ್ಣಿಗೆ ಕಟ್ಟಿದಂತಾ ಗಿದೆ. ಕಾಮವೇ ಇಹಜೀವನದ ಪುರುಷಾರ್ಥವು ಎಂದು ಅರಿತು ಪ್ರಪಂಚವನ್ನೇ ಮರೆತು ಮರೆಯುವ ತರುಣ-ತರುಣಿ ಯರಿಗೆ ಪ್ರಪಂಚದ ಜ್ಞಾನವನ್ನು ಮಾಡಿಕೊಡಲು ಬಂದ ಕಷ್ಟವೇ ಮಲುಹಣ ಮಲುಹಣಿಯರ ಕಷ್ಟ. ಕಷ್ಟಪರಿ ಹಾರಕ್ಕೆ ಭಕ್ತಿಯೇ ಅಂಜನ ಎಂಬುದನ್ನು ಕವಿಯು ಸ್ಪಷ್ಟ ಪಡಿಸಿ ಎಲ್ಲ ಕನ್ನಡಿಗ ಕನ್ನಡಿತಿಯರೂ ಶಂಕರನನ್ನು ಆರಾಧಿ ಸುವಂತೆ ಮಾಡಿದ್ದಾನೆ.

## ತಮೋಗುಣದಿಂದ ಮಂಗಳ

ಒಮ್ಮೆ ರಾಮಕೃಷ್ಣ ಪರಮಹಂಸರು ತಮೋಗುಣವನ್ನೂ ಪರಹಿತಕ್ಕಾಗಿ ಉಪಯೋಗಿಸಬಹುದೆಂದು ಸಾರಿದರು. ಇದು ಅವರು ಅದಕ್ಕೆ ನೀಡಿರುವ ಒಂದು ದೃಷ್ಟಾಂತ :

" ಡಾಕ್ಟರುಗಳಲ್ಲಿ ಮೂರು ವಿಧ–ಉತ್ತಮ, ಮಧ್ಯಮ, ಅಧಮ. ಯಾವ ಡಾಕ್ಟರ್ ರೋಗಿಯ ನಾಡಿಯನ್ನು ಹಿಡಿದು ನೋಡಿ 'ಔಷಧಿ ಕುಡಿಯಪ್ಪಾ' ಎಂದು ಹೇಳಿ ಹೊರಟುಹೋಗುತ್ತಾನೆಯೋ ಆತನು ಅಧಮ ಡಾಕ್ಟರ್. ರೋಗಿ ಔಷಧಿ ಕುಡಿದನೋ ಇಲ್ಲವೊ ಎಂದು ಆತ ಮತ್ತೆ ವಿಚಾರಿಸುವುದೇ ಇಲ್ಲ. ಮಧ್ಯಮ ಡಾಕ್ಟರಾದರೋ ವಿವಿಧ ರೀತಿಯಿಂದ ರೋಗಿಗೆ ಔಷಧಿ ಕುಡಿಯುವಂತೆ ತಿಳಿಸಿ ಆತನ ಮನಸ್ಸನ್ನು ಒಪ್ಪಿಸಿ ಅಕ್ಕರೆಯಿಂದ ಹೇಳುತ್ತಾನೆ, 'ನೀನು ಔಷಧಿ ಕುಡಿಯದಿದ್ದರೆ ನಿನಗೆ ಹೇಗೆ ಗುಣವಾದೀತು. ಇದನ್ನು ನಾನೇ ಸ್ವತಃ ತಯಾರಿಸಿದ್ದೇನೆ ಕುಡಿ' ಎಂದು ಹೇಳುತ್ತಾನೆ. ಆದರೆ ಯಾವ ಡಾಕ್ಟರ್ ಯಾವ ವಿಧದಿಂದಲೂ ರೋಗಿ ಔಷಧಿ ಸೇವಿಸದಿರುವುದನ್ನು ನೋಡಿ ಆತನ ಎದೆಯ ಮೇಲೆ ಮಂಡಿಯೂರಿ ಬಲಾತ್ಕಾರದಿಂದ ಆತನಿಗೆ ಕುಡಿಸಿಬಿಡುತ್ತಾನೋ ಆತನೇ ಉತ್ತಮ ಡಾಕ್ಟರ್. ಈತನಲ್ಲಿ ತಾಮಸೀಗುಣ ವ್ಯಕ್ತವಾಗಿದೆ. ಈ ಗುಣ ದಿಂದ ರೋಗಿಗೆ ಒಳ್ಳೆಯದಾಗುತ್ತದೆಯೇ ವಿನಾ ಅಪಕಾರವಾಗದು ".

ಸಂಗ್ರಹ : "ಗಾನಪ್ರಿಯ"

*　　*　　*　　*

ಎಲ್ಲರೂ ತೋಟ ನೋಡಿಯೇ ಸಂತುಷ್ಟರಾಗಿ ಬಿಡುತ್ತಾರೆ. ಎಲ್ಲೋ ಒಬ್ಬಿಬ್ಬ ತೋಟದ ಯಜಮಾನನನ್ನು ನೋಡಲು ಪ್ರಯತ್ನಮಾಡುತ್ತಾರೆ. ಜನರು ಈ ಜಗತ್ತಿನ ಸೌಂದರ್ಯದಲ್ಲಿಯೇ ಮಗ್ನರಾಗಿ ಬಿಡುತ್ತಾರೆ. ಇದರ ಕರ್ತನನ್ನು ಹುಡುಕುವುದಿಲ್ಲ.

—ಶ್ರೀ ರಾಮಕೃಷ್ಣ ಪರಮಹಂಸರು

# ಭಕ್ತಿಮಾರ್ಗ

"ಭಕ್ತಪ್ರಿಯ"

ಮನುಷ್ಯ ಸೃಷ್ಟಿಗೆ ಕಿರೀಟಪ್ರಾಯವಾಗಿರುವವನು–ಎಂಬ ಮಾತು ಸರ್ವಸಮ್ಮತವಾಗಿವೆ. ಜಗತ್ತಿನಲ್ಲಿ ಮಾನವನು ಬುದ್ಧಿ, ಕರ್ಮ ಮತ್ತು ಗುಣ–ಈ ಮೂರರಲ್ಲಿಯೂ ಇತರ ಪ್ರಾಣಿಗಳಿಗಿಂತ ಶ್ರೇಷ್ಠನು. ಈ ವಿಜ್ಞಾನಯುಗದಲ್ಲಂತೂ ಮಾನವ ತನ್ನಲ್ಲಿ ಹುದುಗಿರುವ ಎಲ್ಲ ಶಕ್ತಿಗಳನ್ನೂ ಪ್ರಕೃತಿ ರಹಸ್ಯವನ್ನು ಭೇದಿಸುವುದಕ್ಕಾಗಿ ಉಪಯೋಗಿಸುತ್ತಿದ್ದಾನೆ. ಜಗತ್ತಿನ ಎಲ್ಲೆಯನ್ನು ದಾಟಿ ಲೋಕ ಲೋಕಗಳ ನಡುವೆ ತನ್ನ ದಿಗ್ವಿಜಯವನ್ನು ಸ್ಥಾಪಿಸುತ್ತಿದ್ದಾನೆ. ಇಷ್ಟಾದರೂ ಮನುಷ್ಯನ ಶಕ್ತಿ ಸಾಮರ್ಥ್ಯಗಳು ಮಿತಕ್ಕೆ ಸಿಲುಕಿವೆ. ಅವುಗಳನ್ನು ವೃದ್ಧಿಸಿಕೊಂಡರೂ ತದನುಗುಣವಾಗಿ ಸೃಷ್ಟಿಯ ಕರ್ತೃವಾದ ದೈವೀ ಶಕ್ತಿಯು ವಿಸ್ತಾರದಲ್ಲಿ ಮತ್ತು ವೈವಿಧ್ಯತೆಯಲ್ಲಿ ಬೆಳೆಯುತ್ತಿರುವಂತೆ ಕಾಣುತ್ತದೆ. ಅಂದಮೇಲೆ ಮಿತವಾದ ಮಾನವಶಕ್ತಿ ವಿಶ್ವವ್ಯಾಪಕವಾದ ದೈವೀಶಕ್ತಿಗೆ ಅಧೀನ; ಹಾಗೂ ಅದರ ಒಂದು ಅಂಶ.

ಮನುಷ್ಯಜನ್ಮ ಒಂದು ಆಕಸ್ಮಿಕವಲ್ಲ; ಅದು ವಿಶ್ವಾಧಿಪತಿ ಬ್ರಹ್ಮನ ಒಂದು ಆವಿರ್ಭಾವ. ಪ್ರತಿಯೊಬ್ಬ ಜೀವಿಗೂ ಒಂದು ಗುರಿಯಿದೆ; ಒಂದು ಉದ್ದೇಶವಿದೆ. ಹಿಂದೂಧರ್ಮ ರೀತ್ಯಾ ಎಲ್ಲ ಜೀವಿಗಳ ಅಂತ್ಯಗುರಿಯಂತೂ ಅವುಗಳ ಜನ್ಮಪಿತೃವಾದ ಬ್ರಹ್ಮನಲ್ಲಿ ಐಕ್ಯಗೊಳ್ಳುವುದು. ಇದು ಸಾರ್ಥಕವಾಗಬೇಕಾದರೆ ಜೀವ ತನ್ನಲ್ಲಿರುವ ದೈವವನ್ನು ಆದಷ್ಟು ಹೊರಹೊಮ್ಮಿಸಬೇಕು; ಅದರ ದಿವ್ಯ ದರ್ಶನ ಅವನಿಗಾಗಬೇಕು. ಜೊತೆಗೆ ತಾನು ಸಮಾಜದ, ಲೋಕದ ಒಬ್ಬ ವ್ಯಕ್ತಿ–ಎಂಬ ಜೀವಂತ ಪ್ರಜ್ಞೆಯನ್ನಿಟ್ಟುಕೊಂಡಿರಬೇಕು. ಆಗ ವ್ಯಕ್ತಿಜೀವನ ವಿಕಾಸವಾಗುತ್ತದೆ; ರಸಮಯವಾಗುತ್ತದೆ; ತನ್ಮೂಲಕ ಲೋಕಕಲ್ಯಾಣವಾಗುತ್ತದೆ; ವ್ಯಕ್ತಿಯ ಆತ್ಮಕ್ಕೆ ವಿಶ್ವವ್ಯಾಪಕ ಬ್ರಹ್ಮತ್ವದ ದರ್ಶನವಾಗುತ್ತದೆ. ಕ್ರಮೇಣ ಬ್ರಹ್ಮಸಾಗರದಲ್ಲಿ ವ್ಯಕ್ತಿಯ ಆತ್ಮದ ನದಿ ಹೋಗಿ ಸೇರುತ್ತದೆ. ಈ ಸಾಕ್ಷಾತ್ಕಾರಕ್ಕೆ ಮೂರು ಮಹಾದ್ವಾರಗಳಿವೆ: ಜ್ಞಾನ, ಕರ್ಮ ಮತ್ತು ಭಕ್ತಿಗಳು. ಜ್ಞಾನವೆಂದರೆ ಅರಿವು. ಆತ್ಮನನ್ನು ಕುರಿತು ಮನಸ್ಸು ಧ್ಯಾನಿಸುವಂತೆ ಜ್ಞಾನ ಸಹಾಯವಾಗಿ, ನೇರವಾಗಿ ಸಾಕ್ಷಾತ್ಕಾರಕ್ಕೆ ನಮ್ಮನ್ನು ಕರೆದೊಯ್ಯಬಲ್ಲದು. ಇದೇ ಜ್ಞಾನಮಾರ್ಗ. ಜ್ಞಾನಿಗಳಂತೆ ಎಲ್ಲ ಪರಿಸ್ಥಿತಿಗಳಲ್ಲಿಯೂ ಪ್ರಾಪಂಚಿಕ ಜೀವನವನ್ನು ನಡೆಸಿಕೊಂಡು, ಕರ್ತವ್ಯವನ್ನು ಪಾಲಿಸಿಕೊಂಡು, ಮನಸ್ಸನ್ನು ಸಮತ್ವದಲ್ಲಿಟ್ಟುಕೊಂಡು, ಪ್ರಚಂಡ ಕರ್ಮದ ಮಧ್ಯದಲ್ಲಿ ಸತತ ಶಾಂತಿಯಿಂದ ಆತ್ಮನ ಮತ್ತು ಪ್ರಪಂಚದ ನೈಜಸ್ವಭಾವವನ್ನು ಕುರಿತು ಚಿಂತನ ಮಾಡುವುದೇ ಕರ್ಮಮಾರ್ಗ. ಜಗತ್ತನ್ನು ಆಳುತ್ತಿರುವ, ಚೈತನ್ಯಮಯವಾಗಿ ಮಾಡುತ್ತಿರುವ ಏಕೈಕ ಭಗವತ್ ಶಕ್ತಿಯ ಬಗ್ಗೆ ಆಸಕ್ತಿ ಹಾಗೂ ಪ್ರೀತಿಗಳನ್ನು ಬೆಳಸಿಕೊಂಡು ಅದರ ದರ್ಶನ ಮಾಡಿಕೊಳ್ಳುವುದೇ ಭಕ್ತಿಮಾರ್ಗ.

ಈ ಮೂರು ಮಾರ್ಗಗಳಲ್ಲಿ ಭಕ್ತಿಮಾರ್ಗ ಶ್ರೇಷ್ಠ. ಇದಕ್ಕೆ ದೇಹ, ಮನಸ್ಸುಗಳ ವ್ಯಾಯಾಮವಾಗಲಿ ವಿಚಾರವಾಗಲಿ ಅನವಶ್ಯ. ಅಷ್ಟೆ ಅಲ್ಲ; ಸ್ವಭಾವಕ್ಕೆ ವಿರುದ್ಧವಾದ ಯಾವ ಕೆಲಸವನ್ನು ಭಕ್ತಿಯೋಗವು ವಿಧಿಸುವುದಿಲ್ಲ. ಇದು ಎಲ್ಲರಿಗೂ ತೆರೆದಮಾರ್ಗ. ದೇವರನ್ನು ಪ್ರೀತಿಯಿಂದ ಒಲಿಸಿಕೊಂಡು ಅವನನ್ನು ಕಾಣಬಹುದೆಂಬ ಸತ್ಯವೇ ಇದರ ತತ್ವ. ಇದು ಉಳಿದೆರಡು ಸಾಧನಗಳಿಗಿಂತ ಸುಲಭವೂ ಹೌದು. ಆದುದರಿಂದಲೇ ಸ್ವಾಮಿ ವಿವೇಕಾನಂದರು,

> "Bhakti is greater than Karma, greater than Yoga, because these are intended for an object in view, while Bhakti is its own fruition, its own means and end. It is the easiest and most natural way to reach the great Divine end"

ಎಂದು ಘೋಷಿಸಿದರು.

ಭಗವಂತನ ಬಗ್ಗೆ ನಾವು ಇಟ್ಟುಕೊಳ್ಳುವ ಪ್ರೀತಿಯೇ ಭಕ್ತಿ. ಅಂದಮೇಲೆ ನಮ್ಮಲ್ಲಿರುವ ಪ್ರೀತಿಶಕ್ತಿಯು ಬಹು ಮುಖ್ಯವಾದುದು; ಅದೇ ನಮ್ಮ ಜೀವನದ ಗುಟ್ಟು. ಪ್ರೀತಿಯಂತೆ ನಮ್ಮ ಧರ್ಮ, ಆಚಾರ–ವ್ಯವಹಾರಗಳು. ಪ್ರಪಂಚವನ್ನೇ ಇದು ಮೋಹಪಾಶದಲ್ಲಿ ಕಟ್ಟುತ್ತದೆ. ಪ್ರೀತಿಯಿಲ್ಲದ

ಜೀವನ ಜೀವವಿಲ್ಲದ ದೇಹದಂತೆ. ಪ್ರೀತಿಗೆ ರಚನಾತ್ಮಕ ಶಕ್ತಿಯೂ ಉಂಟು, ವಿನಾಶಾತ್ಮಕ ಶಕ್ತಿಯೂ ಉಂಟು. ಇದು ಮನುಷ್ಯನ ಕೈಯಲ್ಲಿ ಸಮಾಜದ ಹಿತಸಾಧನೆಗೆ, ಲೋಕಕಲ್ಯಾಣಕ್ಕೆ ಬೇಕಾದ ಕೆಲಸಗಳನ್ನು ಮಾಡಿಸಬಲ್ಲದು. ಮಹಾಪುರುಷರ ಜನನವಾಗುವುದೇ ಮಾನವಕೋಟಿಯ ವಿಚಾರದಲ್ಲಿ ಅವರಿಗಿರುವ ಅವ್ಯಾಜಪ್ರೇಮದಿಂದ ಹಿಮಾಲಯದ ಗೌರೀಶಂಕರ ಶಿಖರಾನ್ವೇಷಣೆಯಾಗಲೀ, ಚಂದ್ರಲೋಕಾನ್ವೇಷಣೆಯಾಗಲೀ, ವಿಜ್ಞಾನದ ಮೇಲಿನ ಪ್ರೀತಿಯಿಂದಾಗಿ. ಮಗುವಿಗಾಗಿ ಪ್ರಾಣ ತ್ಯಾಗಮಾಡುವ ತಾಯಿಗೆ, ಪ್ರೇರಕವಸ್ತು ಅವಳ ಅನುಪಮ ಪ್ರೀತಿಯೇ. ರಾಜಕೀಯ ಖೈದಿ ಸೆರೆಮನೆಗೆ ಹೋಗುವುದು ತನ್ನ ದೇಶಪ್ರೇಮದಿಂದ. ಇನ್ನು ಪ್ರೀತಿಭಾವದ ವಿನಾಶಾತ್ಮಕ ಶಕ್ತಿಯೆಂದರೆ ಕೊಲೆಪಾತಕನೊಬ್ಬನ ಸ್ವಾರ್ಥ ಅಥವಾ ಅರ್ಥಮೋಹ. ಮೋಸಗಾರನ ಮೋಸ ಅವನ ಆಸ್ತಿ ಅಥವಾ ಕೀರ್ತಿಯ ಪ್ರೀತಿಯಿಂದಾಗಿ. ಈಚೀಚೆಗೆ ಕೇಳಿಬರುವ ಪ್ರಾಂತೀಯ ದ್ವೇಷ, ಘರ್ಷಣೆಗಳು ಪ್ರಾಂತ ಪ್ರೀತಿಯಿಂದಲೇ. ಪ್ರೀತಿಯು ಭಾವಶಕ್ತಿಯುತವಾದುದು; ಹೇಗೆ ಉಪಯೋಗಿಸಿದರೆ ಹಾಗೆ ಫಲ ಕೊಡುತ್ತದೆ

ಪ್ರೀತಿರಸವನ್ನು ಸದುಪಯೋಗ ಪಡಿಸುವುದೇ ಭಕ್ತಿಮಾರ್ಗ. ಭಗವಂತನನ್ನು ಕುರಿತು ಭಕ್ತನು ತಳೆಯುವ ಪರಮ ಪ್ರೀತಿಯೇ ಭಕ್ತಿ. ದೇವರಲ್ಲಿನ ನಿಜವಾದ ಪ್ರೇಮ ಹೆಚ್ಚಿದಂತೆಲ್ಲಾ ಇಂದ್ರಿಯ ವಿಷಯಗಳಲ್ಲಿನ ಅನುರಾಗ ಇಳಿಯುತ್ತದೆ; ಔದಾರ್ಯದ ಬುದ್ಧಿ ಬರುತ್ತದೆ; ನಿಜವಾದ ಸಂತೋಷ ಉಕ್ಕುತ್ತದೆ. ನಮ್ಮ ದೇಶದ ಪ್ರಸಿದ್ಧ ಸಾಧುವೂ ಹಿಂದೀ ರಾಮಾಯಣ ಕರ್ತನೂ ಆದ ತುಳಸೀದಾಸನು ತಾರುಣ್ಯದಲ್ಲಿ ತನ್ನ ಪತ್ನಿಯಲ್ಲಿ ಅತಿ ಆಸಕ್ತಿ ಇಟ್ಟಿದ್ದನು. ಅರಗಳಿಗೆಯೂ ಅವಳನ್ನು ಬಿಟ್ಟಿರುತ್ತಿರಲಿಲ್ಲ. ಒಮ್ಮೆ ಆಕೆ ತನ್ನ ತೌರುಮನೆಗೆ ಹೋದಳು. ಇತ್ತ ತುಳಸೀದಾಸ್ ವಿರಹ ವೇದನೆಗೆ ಸಿಕ್ಕಿದ. ಏಕಾಂಗಿಯಾಗಿರಲು ಅವನಿಗೆ ದುಸ್ಸಾಧ್ಯವಾಯಿತು; ಕೊನೆಗೆ ಹೆಂಡತಿಯನ್ನು ಹಿಂಬಾಲಿಸಿ ಮಾವನ ಮನೆಗೆ ಹೊರಟ. ಇದನ್ನು ತಿಳಿದ ಆತನ ಹೆಂಡತಿ ಹೇಳಿದಳು: "ನಿಮಗೆ ನನ್ನಲ್ಲಿ ಎಷ್ಟು ಅನುರಾಗ! ಇದನ್ನು ನೀವು ದೇವರಲ್ಲಿ ಇಡುವುದಾದರೆ ಈ ಕ್ಷಣವೇ ಅವನನ್ನು ಕಾಣುವಿರಿ" ಈ ಮಾತು ತುಳಸಿಯ ಮನಸ್ಸನ್ನು ಕದಡಿತು. ಅವನ ಮನಸ್ಸು ತಿಳಿಯಾಗಿ ಅವನು ಭಗವದ್ಭಕ್ತನಾದನು. ಕಾಲಕ್ರಮದಲ್ಲಿ ದೇವರನ್ನು ಕಂಡು, ಇತರರಿಗೂ ದೈವ ಸಾಕ್ಷಾತ್ಕಾರದ ಸಿಹಿಯನ್ನು ಹಂಚಿದನು. ಇದು ಭಕ್ತಿಯೋಗ ನೀಡುವ ಅಮೃತದ ಒಂದು ನಿದರ್ಶನ. ಇದೊಂದು ಸುಲಭವಾದ ಮೋಕ್ಷ ಸಾಧನ ಮಾರ್ಗವೆಂತಲೇ ಹಿಂದೂ, ಕ್ರೈಸ್ತ ಮತ್ತು ಮಹಮ್ಮದೀಯ ಮತಗಳು ಭಕ್ತಿಮಾರ್ಗವನ್ನು ಸಾರುತ್ತವೆ.

ಭಕ್ತನಾದವನು ಭಕ್ತಿಮಾರ್ಗದಲ್ಲಿ ಹೋಗಿ ಸೇರಲು ಕೆಲವು ಸುಲಭವಾದ ಕಾಲುದಾರಿಗಳನ್ನು ಹಿಡಿಯಬೇಕು. ಅಂದರೆ ಕೆಲವು ಸಣ್ಣ ಸಣ್ಣ ನಿಯಮಗಳನ್ನು ಅನುದಿನವೂ ಅನುಸರಿಸಬೇಕು. ಭಗವಂತನ ನಾಮೋಚ್ಚಾರಣೆ ಮಾಡುವುದು, ದೇವರನ್ನು ಕುರಿತ ಕೀರ್ತನೆಗಳನ್ನು ಹಾಡುವುದು, ಸ್ತೋತ್ರ, ಆರಾಧನೆ ಮತ್ತು ಧ್ಯಾನಗಳನ್ನು ಮಾಡುವುದು, ಬಿಡುವಿಲ್ಲದೆ ಮಹಾತ್ಮರ ಜೀವನ ಕಥೆಗಳನ್ನು ಶ್ರವಣಮಾಡುವುದು-ಭಕ್ತಿಮಾರ್ಗಕ್ಕೆ ಒಯ್ಯುತ್ತವೆ. ನಂತರ ಭಕ್ತನು ಅಹಿಂಸೆ, ಸತ್ಯ, ದಯೆ, ಶುಚಿತ್ವ ಮತ್ತು ನಿರಂತರ ದೈವ ಭಕ್ತಿಯೇ ಮೊದಲಾದ ಸದ್ಗುಣಗಳನ್ನು ಬೆಳೆಸಿಕೊಳ್ಳಬೇಕು. ಆಗ ಅವನು ಗೀತಾಚಾರ್ಯ, 'ಯೋಮಾಂ ಪಶ್ಯತಿ ಸರ್ವತ್ರ ಸರ್ವಂ ಚಮಯಿ ಪಶ್ಯತಿ' ಎಂದು ಹೇಳುವಂತೆ ಎಲ್ಲೆಲ್ಲಿಯೂ ಭಗವಂತನನ್ನು ಕಾಣುವನು. ಭಗವಂತನಲ್ಲಿಯೇ ಎಲ್ಲವನ್ನೂ ಕಾಣುವನು. ಇಂತಹ ಭಕ್ತನಿಗೆ ಭಗವದ್ಗೀತೆಯಲ್ಲಿ ಭಗವಂತನ ಅನುಗ್ರಹದ ಭರವಸೆಯೂ ಸಿಕ್ಕಿದೆ.

ಯೇ ಯಥಾಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಂ।
ಮಮವರ್ತ್ಮಾನು ವರ್ತಂತೇ ಮನುಷ್ಯಾಃ ಪಾರ್ಥಸರ್ವಶಃ ॥

ಯಾರು ಯಾರು ಯಾವ ಯಾವ ಪ್ರಕಾರದಲ್ಲಿ ಭಗವಂತನನ್ನು ಭಜಿಸುವರೋ ಅವರನ್ನು ಇಷ್ಟಾರ್ಥ ಪ್ರಧಾನದಿಂದ ಭಗವಂತನು ಅದೇ ರೀತಿಯಲ್ಲಿ ಅನುಗ್ರಹಿಸುತ್ತಾನೆ.

ಜಗತ್ತಿನ ಪ್ರತಿಯೊಂದು ಮತದಲ್ಲಿಯೂ ಅವತಾರ ಪುರುಷರ ಜನನಗಳಾಗಿರುತ್ತವೆ. ಅವರು ಸಾಮಾನ್ಯರಂತೆ ಜೀವಿಸಿ, ಮಹಾಸಾಧನೆಗಳನ್ನು ಮಾಡಿರುತ್ತಾರೆ. ಹಿಂದೂಮತದಲ್ಲಿ ರಾಮ, ಕೃಷ್ಣ, ಬುದ್ಧ, ಬಸವಾದಿಗಳೂ, ಮಹಮ್ಮದೀಯ ಮತದಲ್ಲಿ ಮಹಮ್ಮದ್ ಪೈಗಂಬರರೂ, ಕ್ರೈಸ್ತಮತದಲ್ಲಿ ಏಸುಸ್ವಾಮಿಯೂ ಮಾನವರೂಪದ ದೈವೀಪುರುಷರು. ಇವರು ತಮ್ಮ ಜೀವಿತ ಕಾಲದಲ್ಲಿ ಇಡೀಜನಾಂಗಕ್ಕೆ ದೈವತ್ವದ ಪ್ರೇರಣೆಯನ್ನು ಉಂಟುಮಾಡಿದವರು ಭಕ್ತನು ಇಂತಹವರ ಆದರ್ಶಗಳನ್ನೂ ಬೋಧನೆಗಳನ್ನು ಅನುಸರಿಸಬೇಕು. ಇವುಗಳಿಂದ ಇವನ ದಾರಿ ಸುಗಮವಾಗುತ್ತದೆ. ಬೆಳಕು ಸನಿಹವಾಗುತ್ತದೆ.

ಭಕ್ತರಲ್ಲಿ ಸಾಮಾನ್ಯವಾಗಿ ಎರಡು ವಿಧಗಳಿವೆ. ತಾಂತ್ರಿಕ ಭಕ್ತರು ಅಥವಾ ಶಾಕ್ತರು ಮತ್ತು ವೈಷ್ಣವಭಕ್ತರು. ತಾಂತ್ರಿಕ ಭಕ್ತರು ದೇವರನ್ನು ಜಗನ್ಮಾತೆಯೆಂದೂ ಅವಳನ್ನು ದುರ್ಗಾ, ಚಂಡೀ, ಕಾಳೀ, ತಾರ ಮತ್ತು ಭುವನೇಶ್ವರಿ ಮೊದಲಾದ

ರೂಪಗಳಿಂದ ಪೂಜಿಸುತ್ತಾರೆ. ಜೀವಾತ್ಮ ಮತ್ತು ಪರಮಾತ್ಮರ ಐಕ್ಯವನ್ನು ಜ್ಞಾಪಕಕ್ಕೆ ತಂದುಕೊಳ್ಳುವುದು ಇವರ ಸಾಧನೆಯ ವೈಶಿಷ್ಟ್ಯ. ಶಕ್ತಿಯೂ ಬ್ರಹ್ಮನಿಂದ ಇಳಿದುಬಂದು ಎಲ್ಲ ನಾಮರೂಪಗಳಲ್ಲಿಯೂ ವ್ಯಕ್ತಳಾಗುವಳೆಂದು ಇವರ ನಂಬಿಕೆ. ತಾಂತ್ರಿಕಭಕ್ತರಲ್ಲಿ ಪಶ್ವಾಚಾರದವರು, ವೀರಾಚಾರದವರು ಮತ್ತು ದೈವಾಚಾರದವರು-ಎಂಬ ಮೂರು ದರ್ಜೆಗಳಿವೆ. ಇವುಗಳಲ್ಲಿ ಮೊದಲನೆಯವರು ತಮಸ್ವಿಗಳು, ಎರಡನೆಯವರು ರಜಸ್ವಿಗಳು ಮತ್ತು ಮೂರನೆಯವರು ಸಾತ್ವಿಕರು. ಪಶ್ವಾಚಾರದವರು ಮತ್ತು ವೀರಾಚಾರದವರು ಪ್ರವೃತ್ತಿಮಾರ್ಗದವರಾದರೆ, ದೈವಾಚಾರದವರು ನಿವೃತ್ತಿಮಾರ್ಗದವರು. ವೈಷ್ಣವಭಕ್ತರು ಐದು ರೀತಿಗಳಲ್ಲಿ ಭಕ್ತಿಭಾವವನ್ನು ಬೆಳೆಸಿಕೊಳ್ಳುತ್ತಾರೆ. ಅವುಗಳನ್ನು ಶಾಂತ, ಸಖ್ಯ, ದಾಸ್ಯ, ವಾತ್ಸಲ್ಯ ಮತ್ತು ಮಧುರ ಭಾವಗಳೆಂದು ಕರೆಯುವರು. ಶಾಂತಭಾವದವರು ದೇವರಲ್ಲಿ ಅನನ್ಯ ಭಕ್ತಿಯನ್ನು ತೋರಿಸಿ, ಅವನ ಮುಖ್ಯಗುಣಗಳನ್ನು ತಿಳಿಯುವರು. ಇಂತಹವರಲ್ಲಿ ಸನಕ, ಸನತ್ಕುಮಾರಾದಿ ಸಪ್ತಋಷಿಗಳು ಶ್ರೇಷ್ಠರು. ದಾಸ್ಯಭಾವದ ಭಕ್ತರಲ್ಲಿ ತಾವು ಭಗವಂತನ ದಾಸರೆಂಬ ಭಕ್ತಿಯಿದ್ದು ಅವನ ಇಚ್ಛೆಯಂತೆ ಸೇವೆ ಮಾಡುತ್ತಾರೆ. ಇಂತಹ ಭಕ್ತರಲ್ಲಿ ಹನುಮಂತ ಶ್ರೇಷ್ಠ. ಅರ್ಜುನ ಕೃಷ್ಣಪರಮಾತ್ಮನೊಡನೆ ಸಖ್ಯಭಾವದಿಂದಿದ್ದನು. ತಾಯಿಯಶೋದೆಯು ವಾತ್ಸಲ್ಯಭಾವದಿಂದ ದೇವರ ಸೇವೆ ಮಾಡಿದಳು. ಗೋಪಿಕಾಸ್ತ್ರೀಯರು ಮಧುರಭಾವದ ಭಕ್ತಿಯ ಮೂಲಕ ದೇವರನ್ನು ಕಂಡರು.

ಭಕ್ತಾದಿಗಳಲ್ಲಿ ಒಂದು ಸಹಜ ಪ್ರಶ್ನೆ ಮೂಡುತ್ತದೆ. ದೇವರು ಆಕಾರ ಗುಣಗಳನ್ನು ಉಳ್ಳವನೇ ? ಅಥವಾ ನಿರಾಕಾರ ಹಾಗೂ ನಿರ್ಗುಣನೇ ? ಇದಕ್ಕೆ ನಿರ್ದಿಷ್ಟವಾದ ಉತ್ತರ ದುಸ್ತರವಾದರೂ, ಆಕಾರ-ನಿರಾಕಾರ, ಗುಣ-ನಿರ್ಗುಣಗಳ ದೇವರು ಕೇವಲ ನಮ್ಮ ಮನಸ್ಸಿನ ಭ್ರಾಂತಿಯ ಫಲವೆಂದು ಹೇಳಬಹುದು. ದೇವರ ಕಡೆ ಮನಸ್ಸನ್ನು ಹರಿಸುವುದಕ್ಕಾಗಿ, ಭಕ್ತನು ಆವನಿಗೊಂದು ಆಕಾರ, ಗುಣಗಳನ್ನು ಅಂಟಿಸುತ್ತಾನೆ. ನಮ್ಮ ಮನಸ್ಸು ಇಂದ್ರಿಯ ಗೋಚರಕ್ಕೆ ನಿಲುಕದ ವಿಷಯವನ್ನು ಗ್ರಹಿಸಲಾರದು. ಆದುದರಿಂದ ದೇವರನ್ನು ಆಕಾರ, ಲಿಂಗ ಮತ್ತು ಗುಣಗಳ ಮೂಲಕ ಭಜಿಸುತ್ತೇವೆ. ಪೂಜಾವಿಧಿಗಳು ಮತ್ತು ಸ್ವರ್ಗನಿರೂಪಣೆಗಳು ನಮ್ಮ ಮುಂದಿನ ಹೆಜ್ಜೆಗಳು. ಈ ರೀತಿಯಲ್ಲಿ ಸಾಕಾರ ಸಗುಣದೇವರನ್ನು ಭಜಿಸುವವರ ಭಕ್ತಿ ಪ್ರೇಮಮಯವಾಗಿರುತ್ತದೆ. ಇಂತಹವರು ಎಲ್ಲ ಜವಾಬ್ದಾರಿಗಳನ್ನೂ ದೇವರ ಮೇಲೆ ಹಾಕುತ್ತಾರೆ. ಇವರ ದಾರಿ ಸುಗಮ.

ದೇವರನ್ನು ನಿರಾಕಾರನೆಂದೂ, ನಿರ್ಗುಣನೆಂದೂ ಪೂಜಿಸಬಹುದು. ಆದರೆ ಇದು ಆಧ್ಯಾತ್ಮಗರುಡಿಯ ಸಿದ್ಧರಿಗೆ ಮಾತ್ರ ಸಾಧ್ಯ. ಈಶ್ವರನ ವಿಶ್ವವ್ಯಾಪಕ ಮಹಿಮೆಯ ಜೀವಂತ ಪ್ರಜ್ಞೆ ಇವರಿಗಿರಬೇಕು. ಸಕಲಚರಾಚರ ಜೀವಿಗಳಲ್ಲಿ ಅವನ ಚೈತನ್ಯವನ್ನು ಕಾಣುವ ಹೃದ್ಯತೆಯಿರಬೇಕು. ಇಂತಹ ಭಕ್ತರು ಈಶ್ವರನನ್ನು ಸಾಗರವಾಗಿ ಕಂಡು ತಾವು ಅದರಲ್ಲಿನ ಮೀನುಗಳಂತಿರುತ್ತಾರೆ. ಇಂದ್ರಿಯಗಳ ಸಂಯಮ ಇವರಿಗಿರುತ್ತದೆ. ಇಂತಹವರು ಇತರರ ಸೇವೆಯಲ್ಲಿ ಮಗ್ನರಾಗಿ ಕಡೆಗೆ ವಿಶ್ವಕುಟುಂಬಿಗಳಾಗುತ್ತಾರೆ. ಇವರ ಭಕ್ತಿ ಜ್ಞಾನಮಯವಾಗಿರುತ್ತದೆ. ಸಾಕಾರ ಸಗುಣ ದೇವರ ಭಕ್ತರಂತೆ ಇವರು ತಮ್ಮ ಜವಾಬ್ದಾರಿಗಳನ್ನು ದೇವರ ಮೇಲೆ ಹಾಕಲಾರರು; ತಾವೇ ಹೊರುತ್ತಾರೆ.

ಸಾಕಾರ-ಸಗುಣ ದೇವರ ಭಕ್ತರು ಮತ್ತು ನಿರಾಕಾರ ನಿರ್ಗುಣ ದೇವರ ಭಕ್ತರು-ಇವರಲ್ಲಿ ಯಾರು ಮೇಲೆಂದು ಯೋಚಿಸುವುದು ಅನುಚಿತ. ಇವರಲ್ಲಿ ಒಬ್ಬರು ಬೆಳೆಯುತ್ತಿರುವ ಮಕ್ಕಳ ಹಾಗೆ; ಇನ್ನೊಬ್ಬರು ಬೆಳೆದ ವಯಸ್ಕರಂತೆ. ಅಂದಮೇಲೆ ಮೊದಲು ಸಾಕಾರ-ಸಗುಣ ದೇವರ ಭಕ್ತನ ಸ್ಥಿತಿಯಿಂದ ಪ್ರಾರಂಭವಾಗಿ ನಿರಾಕಾರ-ನಿರ್ಗುಣ ದೇವರ ಭಕ್ತನ ಸ್ಥಿತಿಯನ್ನು ಸೇರಬಹುದು ಅಥವಾ ಯಾವುದಾದರೊಂದು ಸ್ಥಿತಿಯಲ್ಲೇ ಭಗವಂತನನ್ನು ಕಾಣಬಹುದು. ಹೀಗೆ ಭಗವಂತನನ್ನು ಸಾಕ್ಷಾತ್ಕರಿಸಿಕೊಂಡ ಪುಣ್ಯಪುರುಷರ ಕಥೆಗಳು ಪುಣ್ಯಭೂಮಿಯಾದ ಭಾರತದಲ್ಲಿ ಅನೇಕವಿವೆ. ಇವು ನಮ್ಮ ನಾಡಿನಲ್ಲಿ ಸಹಸ್ರಾರು ವರ್ಷಗಳ ತಲೆಮಾರುಗಳಿಂದ ಉಳಿದುಬಂದಿರುವ ನಮ್ಮ ಸಾಂಸ್ಕೃತಿಕ ಸ್ವತ್ತು.

A learned ignorance is the end of Philosophy and the beginning of religion.
(ತತ್ವಶಾಸ್ತ್ರಗಳನ್ನೆಲ್ಲಾ ಓದಿ ಮುಗಿಸುವುದರಲ್ಲಿ ಮನುಷ್ಯ ಪಂಡಿತಮೂರ್ಖನಾಗುತ್ತಾನೆ. ಅನಂತರ ಅವನ ಭಗವದಭಿಮುಖ ಜೀವನ ಪ್ರಾರಂಭಿಸುತ್ತದೆ.)

—*Hamilton*

# ಮೂರು ಪತ್ರಗಳು

ಶ್ರೀ ಉ. ಕಾ. ಸುಬ್ಬರಾಯಾಚಾರ್

ಪ್ರಿಯ ರಮೇಶ್,

ನನಗೆ ತುಂಬ ದುಃಖವಾಗಿದೆ. ಕೈ ನಡುಗುತ್ತಿದೆ. ಕಣ್ಣಲ್ಲಿ ನೀರು ಒಂದೇಸಮನೆ ಹರಿಯುತ್ತಿದೆ. ತಂದೆಯವರು ಒಪ್ಪಿದರೂ ಅಮ್ಮ ಒಪ್ಪಲಿಲ್ಲ. ಅವರ ಮನಸ್ಸನ್ನು ಪರಿವರ್ತಿಸಲು ತುಂಬಾ ಯತ್ನಿಸಿದೆ. ಈ ಆರುತಿಂಗಳ ಕಾಲ ದೊಡ್ಡ ಹೋರಾಟವೇ ನಡೆದು ಹೋಯಿತು. ನನಗೆ ಮೊದಲಿನಿಂದಲೂ ತಾಯಿಯಲ್ಲಿ ಅಪಾರ ಗೌರವ, ತುಂಬು ಪ್ರೀತಿ. ಅವರ ಇಚ್ಛೆಗೆ ನಾನೀಗ ಮಣಿಯಲೇಬೇಕಾಗಿದೆ. ಅವರ ಅಭಿಲಾಷೆಯಂತೆ ಮದುವೆಯಾಗಲು ಒಪ್ಪಿದ್ದೇನೆ. ಲಗ್ನಪತ್ರಿಕೆಯನ್ನು ಈ ಕಾಗದದೊಡನೆ ಕಳುಹಿಸಿದ್ದೇನೆ. ನಿಮಗೆಷ್ಟು ದುಃಖವಾಗುವುದೋ ! ನೀವು ಮಾತ್ರ ನನ್ನನ್ನು ಅನ್ಯಥಾ ಭಾವಿಸಬೇಡಿ. ನಿಮ್ಮ ಶುದ್ಧ ನಿರ್ಮಲ ಪ್ರೇಮವನ್ನು ನನ್ನ ಜೀವನದಲ್ಲಿ ಮರೆಯುವುದಿಲ್ಲ. ನಿಮ್ಮ ನೆನಪು ನನಗೆ ಶಕ್ತಿಯನ್ನು ನೀಡಲೆಂದು ಪ್ರಾರ್ಥಿಸುತ್ತೇನೆ.

ಪ್ರಣಾಮಗಳು

ಇದುವರೆಗೆ 'ನಿಮ್ಮವಳು' ಎಂದು ಬರೆಯುತ್ತಿದ್ದೆ. ಇನ್ನು ಹೇಗೆ ಬರೆಯಲಿ ?

ಲಲಿತ

* * * *

ರಮೇಶನಿಗೆ ಕಾಗದ ಓದಿದೊಡನೆ ತಲೆಗೆ ಸಿಡಿಲು ಬಡಿದಂತಾಯಿತು. ಲಲಿತಳ ಪರಿಸ್ಥಿತಿ ಅವನಿಗೆ ಚೆನ್ನಾಗಿ ತಿಳಿದಿತ್ತು. ಲಲಿತ ಕಡೆಗಾದರೂ ತನ್ನನ್ನು ವಿವಾಹವಾಗಲು ಅವಳ ತಾಯಿ ಒಪ್ಪುವರೆಂದು ತಿಳಿದಿದ್ದ. ಆದರೆ ಅದು ಸಾಧ್ಯವಾಗದೆ ಹೋದುದು ಅವನನ್ನು ಚಿಂತಾಜ್ವಾಲೆಗೇ ಸಿಕ್ಕಿಸಿತ್ತು. ಅವನು ಕಡೆಯ ವರ್ಷದ ಎಂ.ಬಿ.ಬಿ.ಎಸ್. ಪರೀಕ್ಷೆಗೆ ಓದುತ್ತಿದ್ದ. ಪರೀಕ್ಷೆಗೆ ನಾಲ್ಕು ತಿಂಗಳು ಮಾತ್ರ ಇತ್ತು. ಪಾಠಗಳ ಕಡೆಗೆ ಮನಸ್ಸನ್ನು ಏಕಾಗ್ರಗೊಳಿಸುವುದು ಅವನಿಗೆ ಸಾಧ್ಯವಾಗಲಿಲ್ಲ. ಲಲಿತ ಅವನ ಹೃದಯದ ಒಂದು ಭಾಗವೇ ಆಗಿದ್ದಳು. ಈಗ ಅವಳನ್ನು ಬಿಟ್ಟಿರುವುದು ಹೇಗೋ ಅವನಿಗೆ ತಿಳಿಯದಾಯಿತು. ಅವನ ಸುತ್ತಲೂ ಕತ್ತಲು ಕವಿಯಿತು. ಸಹಸ್ರಾರು ಸೂಜಿಗಳು ಅವನ ಹೃದಯವನ್ನು ಚುಚ್ಚಿದಂತಾಯಿತು. ಕಾಗದವನ್ನು ಓದಿದ ಬಳಿಕ ಸಹಿಸಲಸಾಧ್ಯವಾದ ದುಃಖವಾಯಿತು ಅವನಿಗೆ. ಕೊಠಡಿಯ ಬಾಗಿಲನ್ನು ಹಾಕಿಕೊಂಡು ಬಹುಕಾಲ ಬಿಕ್ಕಿಬಿಕ್ಕಿ ಅತ್ತುಬಿಟ್ಟನು.

ಒಂದುತಿಂಗಳು ಕಳೆಯುವುದರಲ್ಲಿ ರಮೇಶನು ಧರಿಸುತ್ತಿದ್ದ ಅಂಗಿಗಳು ಸಡಿಲವಾದವು. ಮಗನಿಗೆ ಭೂತಚೇಷ್ಟೆ ಇರಬಹುದೆಂದು ತಾಯಿತಂದೆಯರು ಅವನಿಗೆ ಯಂತ್ರ ಕಟ್ಟಿಸಿದರು. ಆದರೆ ರಮೇಶ ದಿನದಿನವೂ ಕುಗ್ಗುತ್ತಲೆ ಹೋದ. ಕ್ರಮೇಣ ಹೃದಯರೋಗ ಅವನಿಗೆ ಕಾಣಿಸಿತು. ಅವನ ಗುರುಗಳಾದ ವೈದ್ಯರೇ ಅವನಿಗೆ ಉತ್ತಮ ಚಿಕಿತ್ಸೆ ನೀಡಿ ಅವನ ಹೃದಯರೋಗವನ್ನು ವಾಸಿಮಾಡಿದರು. ಆದರೆ ಆ ರೋಗ ಅವನನ್ನು ಸಂಪೂರ್ಣವಾಗಿ ಬಿಡಲಿಲ್ಲ.

ಪ್ರತಿವರ್ಷವೂ ಪ್ರಥಮದರ್ಜೆಯಲ್ಲಿ ತೇರ್ಗಡೆ ಆಗುತ್ತಿದ್ದ ರಮೇಶ ಹೇಗೋ ಮೂರನೆಯ ದರ್ಜೆಯಲ್ಲಿ ತೇರ್ಗಡೆಯಾಗಿ 'ಹೌಸ್‌ಸರ್ಜನ್' ಆಗಿ ಆಸ್ಪತ್ರೆಯಲ್ಲಿ ಕೆಲಸ ಮಾಡತೊಡಗಿದನು. ಅವನ ಮನಸ್ಸು ಕ್ರಮೇಣ ಕೆಲಸದಲ್ಲಿಯೂ ಸೇವಾ ಕಾರ್ಯದಲ್ಲಿಯೂ ಮಗ್ನವಾಯಿತು.

ಲಲಿತಳ ತಾಯಿಗೆ ತಮ್ಮ ಮಗಳನ್ನು ಶ್ರೀಮಂತರ

ಮನೆಗೇ ಮದುವೆ ಮಾಡಿಕೊಡಬೇಕೆಂಬ ಅಭಿಲಾಷೆ ಮಾತ್ರ ಈಡೇರಿತು. ಪದವೀಧರಳಾದ ಲಲಿತ ಶ್ರೀಮಂತರ ಮಗನನ್ನು ಮದುವೆಯಾದುದಾಯಿತು. ಅವಳ ಪತಿ ನೀಲಕಂಠ ಎಸ್.ಎಸ್.ಎಲ್.ಸಿ. ಮಾಡಿದ್ದ. ಸುಸಂಸ್ಕೃತಳೂ ದೈವಭಕ್ತಳೂ ಆದ ಲಲಿತೆಗೆ ವಿವಾಹವಾಗಿ ಒಂದು ವರ್ಷದಲ್ಲಿಯೇ ಪತಿಯ ಸ್ನೇಹ ಬೆಂಕಿಯಾಯಿತು. ಅಸಂಸ್ಕೃತನೂ ವಿಷಯಲಂಪಟನೂ ಆದ ಪತಿಯೊಡನೆ ಬದುಕುವುದು ಅವಳಿಗೆ ನರಕ ಸದೃಶವಾಯಿತು. ತಾಯಿಯ ಮನಸ್ಸಿಗೆ ವ್ಯಾಕುಲವಾಗಬಾರದೆಂದು ಹೇಗೋ ಜೀವನ ಸಾಗಿಸಿದಳು. ಹನ್ನೆರಡು ವರ್ಷಗಳ ದಾಂಪತ್ಯದ ಫಲವೆಂದರೆ ಅವಳಿಗೆ ಆದ ಮೂರು ಮಕ್ಕಳು! ನೀಲಕಂಠ ಇಸ್ಪೀಟು ವೇಶ್ಯೆಯರ ಸಹವಾಸ ಇವುಗಳಲ್ಲಿಯೇ ಮಗ್ನನಾದನು. ತನ್ನಲ್ಲಿದ್ದ ಆಸ್ತಿಯನ್ನೆಲ್ಲ ಹಾಳುಮಾಡಿದನು. ದಿನದಿನದ ಹೊಟ್ಟೆಯಪಾಡು ನಡೆಯುವುದೇ ಕಷ್ಟವಾಯಿತು. ಮಕ್ಕಳು ಹೊಟ್ಟೆಗಿಲ್ಲದೆ ಬಳಲುವುದನ್ನು ಕಂಡು ನೀಲಕಂಠನ ತಂದೆ ಮಕ್ಕಳನ್ನು ತಮ್ಮ ಮನೆಯಲ್ಲಿಯೇ ಇಟ್ಟುಕೊಂಡರು. ಯಾರ ಹಿತವಚನಗಳೂ ನೀಲಕಂಠನನ್ನು ಪರಿವರ್ತಿಸಲಿಲ್ಲ. ಲಲಿತಳಿಗೂ ಸರಿಯಾದ ಆಹಾರವಿಲ್ಲದೆ ಆರೋಗ್ಯ ಕುಗ್ಗಿತು. ಪತಿಯ ಮನಸ್ಸಿನ ಪರಿವರ್ತನೆಗಾಗಿ ಅವಳು ಹನ್ನೆರಡು ವರ್ಷ ಸಾಧನೆ ಮಾಡಿದ್ದಳು. ವ್ರತ, ಪೂಜೆ, ಜಪಗಳೆಲ್ಲವನ್ನೂ ಮಾಡಿದಳು. ಆದರೆ ನೀಲಕಂಠನ ಮನಸ್ಸು ಸ್ವಲ್ಪವೂ ಪರಿವರ್ತಿತವಾಗಲಿಲ್ಲ. ನೀಲಕಂಠ ಎಂದೂ ಮನೆಗೆ ರಾತ್ರಿ ಹನ್ನೆರಡು ಅಥವಾ ಒಂದುಗಂಟೆಗಿಂತ ಮುಂಚೆ ಬಂದವನಲ್ಲ.

ಒಂದುದಿನ ರಾತ್ರಿ ನೀಲಕಂಠ ರಾತ್ರಿ ಎರಡುಗಂಟೆಗೆ ಬಂದನು. ಅವನ ಕಣ್ಣು ಕೆಂಪಗಾಗಿತ್ತು.

"ಎಲ್ಲಿ, ಊಟಕ್ಕೆ ಬಡಿಸು"

"ಊಟ ಹೇಗೆ ಬಡಿಸಲಿ. ಈದಿನ ಬೆಳಿಗ್ಗೆಯೇ ಹೇಳಿದ್ದೆ' ಅಕ್ಕಿ ಇಲ್ಲ ಎಂದು!"

"ಅಕ್ಕಿ ಪಕ್ಕದ ಮನೆಯಿಂದ ತರಬೇಕಾಗಿತ್ತು. ನಾಳೆ ಕೊಟ್ಟಿದ್ದರಾಗುತ್ತಿತ್ತು"

"ಅಕ್ಕಪಕ್ಕದ ಮನೆಗಳಲ್ಲೆಲ್ಲಾ ತಂದಿದ್ದಾಯಿತು. ಅವರಿಗೆ ಕೊಡಬೇಕಾದುದನ್ನೇ ಕೊಟ್ಟಿಲ್ಲ. ಯಾವ ಮುಖಮಾಡಿಕೊಂಡು ಮತ್ತೆ ಅವರನ್ನು ಬೇಡಲಿ!"

"ನಿನ್ನನ್ನು ಮದುವೆಯಾಗಿ ನಾನು ಹಾಳಾದೆ. ನೀನು ಯಾವ ನಕ್ಷತ್ರದಲ್ಲಿ ಹುಟ್ಟಿದವಳೊ!"

"ನಾನು ಮಾಡಿದ ಅಪರಾಧವಾದರೂ ಏನು? ನೀವು ಇಸ್ಪೀಟಿಗೆ ಹೋಗಬೇಡಿ. ಏನಾದರೂ ಉದ್ಯೋಗ ಮಾಡಿ ಎಂದು ಅದೆಷ್ಟು ಬೇಡಿಕೊಂಡೆ?"

"ಮುಚ್ಚು ಬಾಯಿ. ನನ್ನ ರೀತಿಯಲ್ಲಿ ವರ್ತಿಸಲು ತೋರಿದ ರೀತಿಯಲ್ಲಿ ಮಾತನಾಡಲು ನನಗೆ ಈ ಮನೆಯಲ್ಲಿ ಅಧಿಕಾರವಿಲ್ಲವೆ? ನಿನಗೆ ಈ ಮನೆಯಲ್ಲಿರಲು ಇಷ್ಟವಿಲ್ಲದಿದ್ದರೆ ನಡೆ! ನಿನ್ನಂಥ ಅವಿಧೇಯಳನ್ನು ಕಟ್ಟಿಕೊಂಡು ನಾನು ಕೆಟ್ಟೆ. ಬಿ.ಎ. ಬೇರೆ ಮಾಡಿರುವೆ, ಎಲ್ಲಾದರೂ ಕೆಲಸಕ್ಕೆ ಸೇರಿಕೋ ಎಂದರೆ ಆ ಗಂಡಸರ ಆಫೀಸಿನಲ್ಲಿ ಕೆಲಸಮಾಡುವುದಿಲ್ಲವೆಂದು ಬಗುಳುತ್ತಿ! ಹೆಂಗಸರ ಆಫೀಸನ್ನು ನಿನಗೆ ಸಿದ್ಧಮಾಡಬೇಕೆ? ಪಾಪಿ, ನನ್ನ ಜೀವನವನ್ನೇ ಹಾಳುಮಾಡಿದೆ!"

"ಸ್ವಲ್ಪ ಮೆಲ್ಲಗೆ ಮಾತಾಡಿ. ದಮ್ಮಯ್ಯ! ಪಕ್ಕದ ಮನೆಯವರು ಏನಂದಾರು? ಸ್ವಲ್ಪ ಎಚ್ಚರಿಕೆ ಬೇಡವೆ?"

"ನೀನು ಯಾವ ಘಳಿಗೆಯಲ್ಲಿ ಈ ಮನೆಗೆ ಕಾಲಿಟ್ಟೆಯೋ ನನ್ನ ಆಸ್ತಿಯೆಲ್ಲ ನಾಶವಾಯಿತು! ಈಗ ನನಗೆ ಬುದ್ಧಿ ಬೇರೆ ಹೇಳ್ತಾಳೆ! ಹೆಚ್ಚು ಮಾತಾಡಿದರೆ ಒದೀತೀನಿ ನೋಡು!"

"ಅಯ್ಯೋ ದೇವರೇ, ನನ್ನ ಕನಸೆಲ್ಲವನ್ನೂ ಒಡೆದು ಹಾಕಿದಿರಿ. ರತ್ನದಂಥ ಮಕ್ಕಳೊಡನೆ ಸಂಸಾರ ಮಾಡಿಕೊಂಡು ಸಂತೋಷವಾಗಿರುತ್ತೇನೆ ಎಂದು ಭಾವಿಸಿದ್ದೆ. ದೇವರು ನನ್ನನ್ನು ಎಂಥ ನರಕಕ್ಕೆ ತಳ್ಳಿದ! ಅಯ್ಯೋ....!" ಎಂದು ಬಿಕ್ಕಿಬಿಕ್ಕಿ ಅಳುವುದಕ್ಕೆ ಪ್ರಾರಂಭಿಸಿದಳು ಲಲಿತ.

ರೌದ್ರಾವೇಶದಿಂದ ನೀಲಕಂಠ ಅಳುತ್ತಿರುವ ಲಲಿತಳನ್ನು ಹೊರಕ್ಕೆ ದಬ್ಬಿ ಮನೆಯ ಬಾಗಿಲನ್ನು ದಢಾರನೆ ಮುಚ್ಚಿ ತನ್ನಪಾಡಿಗೆ ತಾನು ಮಲಗಿ ನಿದ್ದೆಹೋದನು.

ಲಲಿತಳಿಗೆ ಜೀವನವೆಲ್ಲ ಶೂನ್ಯವಾಗಿ ಕಂಡಿತು. ಅವಳಿಗೆ ಗಟ್ಟಿಯಾಗಿ ಅಳುವುದಕ್ಕೂ ಭಯವಾಯಿತು. ಅವಳ ಜೀವನದಲ್ಲಿ ಈ ಅನುಭವ ಹೊಸದಲ್ಲ. ಈ ಹನ್ನೆರಡು ವರ್ಷಗಳಲ್ಲಿ ಇಪ್ಪತ್ತು ಸಾರಿಯಾದರೂ ಪತಿಯಿಂದ ಇಂಥ ಶಿಕ್ಷೆಗೆ ಗುರಿಯಾಗಿದ್ದಳು. ಆಗ ಅವಳು ಮನೆಯ ಹಿಂಭಾಗದಲ್ಲಿಯೇ ಮಲಗಿ ರಾತ್ರಿಯನ್ನು ಕಳೆದಿದ್ದಳು. ತನ್ನ ದುಃಖವನ್ನು ನಿಗ್ರಹಿಸಲು ಯತ್ನಿಸಿದ್ದಳು. ಅವಳಿಗೆ ದುಃಖ, ಅಳು ತಡೆಯುವುದು ಸಾಧ್ಯವಾಗಲಿಲ್ಲ. ಇದ್ದಕ್ಕಿದ್ದಂತೆ ರಾತ್ರಿ ಬೆಂಗಳೂರಿಗೆ ಹೊರಡುವ ರೈಲಿನ ಜ್ಞಾಪಕ ಅವಳಿಗೆ ಬಂದಿತು. ನೇರವಾಗಿ ಅವಳು ರೈಲ್ವೇ ನಿಲ್ದಾಣಕ್ಕೆ ಹೊರಟಳು. ಅವಳ ಬಳಿ ಹಣವಿರಲಿಲ್ಲ. ಧೈರ್ಯಮಾಡಿ ರೈಲಿನಲ್ಲಿ ಅವಳು ಪ್ರಯಾಣ ಮಾಡಿ ಮರುದಿನ ಬೆಳಗ್ಗೆ ಒಂಭತ್ತು ಗಂಟೆಗೆ ಬೆಂಗಳೂರನ್ನು ತಲುಪಿದಳು. ಟಿಕೆಟ್ ಕಲೆಕ್ಟರ್ ಟಿಕೆಟ್ ಕೇಳಿದಾಗ ತನ್ನ ಕಿವಿಯ ಓಲೆಯನ್ನೇ ತೆಗೆದು ಕೊಡಹೋದಳು. ಆತನಿಗೆ ಅವಳ

ದೈನ್ಯ ಸ್ಥಿತಿಯನ್ನು ಕಂಡು ಮರುಕ ಬಂದು ಅವಳನ್ನು ಬಿಟ್ಟು ಬಿಟ್ಟನು.

ಲಲಿತಳ ಅಕ್ಕ ರಾಜೇಶ್ವರಿ ಬೆಂಗಳೂರಿನ ಬಸವನಗುಡಿ ಯಲ್ಲಿದ್ದಳು. ಅಕ್ಕನ ಮನೆ ಸೇರುವಾಗ ಹತ್ತುಗಂಟೆ ಆಗಿತ್ತು. ತಂಗಿಯನ್ನು ನೋಡಿ ರಾಜೇಶ್ವರಿಗೆ ಚಿಂತೆಯಾಯಿತು. ಅವಳ ಮುಖವನ್ನು ನೋಡಿದೊಡನೆ ಅವಳಿಗೆ ತಂಗಿಯ ಕಷ್ಟವೆಲ್ಲ ಮನವರಿಕೆಯಾಯಿತು.

"ಅಕ್ಕ, ಇನ್ನು ಆ ಮನೆಗೆ ನಾನು ಕಾಲಿಡುವುದಿಲ್ಲ"

"ಅದೆಲ್ಲ ಇರಲಿ, ಈಗ ಸ್ನಾನಮಾಡಿ ಊಟಮಾಡು!"

"ಭಾವನವರು ಮನೆಯಲ್ಲಿಲ್ಲವೆ ?"

"ಮೈಸೂರಿನಲ್ಲಿ ಆಫೀಸಿನ ಕೆಲಸವಿದೆ ಎಂದು ಹೋಗಿ ದ್ದಾರೆ. ನಾಳೆ ಬರುತ್ತಾರೆ !"

ಲಲಿತ ಊಟಮಾಡಿ ಸ್ವಲ್ಪಹೊತ್ತು ವಿಶ್ರಾಂತಿಗಾಗಿ ಮಲಗಿಕೊಂಡಳು. ಅವಳ ಕಣ್ಣಮುಂದೆ ಅವಳ ಮೂರು ಮಕ್ಕಳೂ ಪತಿಯೂ ಮಾವನೂ ತಾಯಿಯೂ ಸುಳಿದರು. ತಾಯಿ ಮಗಳ ಕಷ್ಟವನ್ನು ನೋಡಲಾರದೆ ಕೊರಗಿ ಕಡೆಗೆ ರಮೇಶನ ನೆನಪು ಅವಳ ಮನಸ್ಸಿನಲ್ಲಿ ಮೂಡಿತು. ಅವನ ಪಾರ್ಶ್ವವಾಯು ರೋಗದಿಂದ ನರಳಿ ಸತ್ತುಹೋಗಿದ್ದರು. ತಾಯಿಯನ್ನು ನೆನೆದು ಕಣ್ಣಿನಲ್ಲಿ ನೀರು ತುಂಬಿತು. ಕಡೆಗೆ ನಿರ್ಮಲ ಸ್ವಭಾವವೂ ತುಂಬು ಪ್ರೇಮವೂ ಅವಳ ಹೃದಯ ವನ್ನು ಆವರಿಸಿದುವು. ರಮೇಶನ ಬಳಿಗಾದರೂ ಹೋಗಿ ಅವನ ಮಾರ್ಗದರ್ಶನದಲ್ಲಿ ಬದುಕನ್ನು ಕಟ್ಟಲು ಯೋಚಿಸಿದಳು. ಆದರೆ ಮಕ್ಕಳ ನೆನಪು, ಸಮಾಜದ ಭೀತಿ ಅವಳಿಗೆ ಅಡ್ಡಿ ಯಾದವು.

ನಾಲ್ಕು ವರ್ಷಗಳು ಕಳೆದುವು. ಲಲಿತ ಅಕ್ಕನ ಮನೆ ಯಲ್ಲಿಯೇ ಇದ್ದು ಬೆಂಗಳೂರಿನ ಶಾಲೆಯೊಂದರಲ್ಲಿ ಅಧ್ಯಾಪಕಿ ಯಾದಳು. ಗಂಡನಾಗಲಿ ಮಾವನಾಗಲಿ ಲಲಿತೆಯನ್ನು ಕರೆಸಿಕೊಳ್ಳುವ ಯೋಚನೆ ಮಾಡಲಿಲ್ಲ. ಲಲಿತಳ ಮಾತೃ ಹೃದಯ ತನ್ನ ಮಕ್ಕಳನ್ನು ಸದಾ ನೆನೆಯುತ್ತಿತ್ತು. ತಿಂಗಳಿ ಗೊಮ್ಮೆ ತಪ್ಪದೆ ಆ ಮುದ್ದು ಮಕ್ಕಳಿಗೆ ಕಾಗದ ಬರೆಯು ತ್ತಿದ್ದಳು. ಆ ಮಕ್ಕಳು ಉತ್ತರ ಬರೆಯುತ್ತಿದ್ದುದು ಎಂದಾದ ರೊಮ್ಮೆ! ಲಲಿತಳ ಭಾವನವರಿಗೆ ಕ್ರಾಂತಿಕಾರಕ ಭಾವನೆ ಗಳಿದ್ದುವು. ಲಲಿತಳ ವಯಸ್ಸು ಮೂವತ್ತಾರು. ತುಂಬಿದ ಆರೋಗ್ಯ. ಅವಳು ವಿವಾಹವಿಚ್ಛೇದನ ಮಾಡಿಕೊಂಡು ಮತ್ತೊಂದು ವಿವಾಹವಾಗುವುದೆ ಉತ್ತಮವೆಂದು ಅವರ ಸಲಹೆ! ಲಲಿತ ತನ್ನ ಮುದ್ದು ಮಕ್ಕಳನ್ನು ನೆನೆದು. ತನ್ನ ಪತಿಯ ಮನಸ್ಸು ಕಡೆಗಾದರೂ ಪರಿವರ್ತನೆಯಾಗಬಹುದೆಂಬ ಭಾವನೆಯಿಂದ ಮದುವೆಯ ವಿಚಾರವನ್ನು ತಲೆಗೆ ಹಚ್ಚಿ ಕೊಳ್ಳಲಿಲ್ಲ. ಆದರೆ ಅಕ್ಕನ ಮನೆಯಲ್ಲಿಯೇ ಹೆಚ್ಚುದಿನ ಇರುವುದೂ ಅವಳಿಗೆ ಇಷ್ಟವಿರಲಿಲ್ಲ. ಒಂಟಿಜೀವನ ಅವಳಿಗೆ ರೋಸಿಹೋಗಿತ್ತು. ಪುರುಷನೊಬ್ಬನ ಸ್ನೇಹ ಅವಳಿಗೆ ಅವಶ್ಯಕ ವೆನಿಸಿತು. ಅವಳಿಗೆ ರಮೇಶನು ಅವಿವಾಹಿತನಾಗಿ ತೀರ್ಥಹಳ್ಳಿ ಯಲ್ಲಿ ಸರ್ಕಾರಿ ಔಷಧಾಲಯದಲ್ಲಿ ವೈದ್ಯನಾಗಿರುವ ವಿಚಾರ ತಿಳಿದಿತ್ತು.

ಒಂದುದಿನ ರಮೇಶನಿಗೆ ಕಾಗದ ಬರೆಯುವ ಸಂಕಲ್ಪ ಮಾಡಿಯೇ ಬಿಟ್ಟಳು.

ಪ್ರಿಯ ಆತ್ಮಬಂಧು,

ಈ ಕಾಗದ ನೋಡಿ ನಿಮಗೆ ಆಶ್ಚರ್ಯವಾಗ ಬಹುದು ! ಹದಿನಾರು ವರ್ಷಗಳಾದ ಬಳಿಕ, ನಿಮಗೆ ಕಾಗದ ಬರೆಯುವೆನೆಂದು ನೀವು ಯೋಚಿಸಿರಲಾರಿರಿ ! ದಯವಿಟ್ಟು ಒಮ್ಮೆ ಬೆಂಗಳೂರಿಗೆ ಬರುತ್ತೀರಾ ? ನಿಮ್ಮನ್ನು ನೋಡಬೇಕೆಂದು ತುಂಬ ಆಸೆಯಾಗಿದೆ. ಹಲವು ವಿಚಾರಗಳನ್ನು ನಿಮ್ಮ ಬಳಿ ಮಾತನಾಡ ಬೇಕಾಗಿದೆ. ದಯವಿಟ್ಟು ಇನ್ನು ಒಂದು ವಾರದಲ್ಲಿಯೇ ಬನ್ನಿ. ನಿಮ್ಮ ಕಾಗದವನ್ನೇ ನಿರೀಕ್ಷಿಸುತ್ತಿದ್ದೇನೆ.

ಪ್ರಣಾಮಗಳು,

ನಿಮ್ಮವಳು

ಲಲಿತ

* * * *

ರಮೇಶನು ಆಸ್ಪತ್ರೆಗೆ ಹೊರಡಬೇಕೆಂದು ಸಿದ್ಧನಾದಾಗ ಈ ಕಾಗದ ಅವನಿಗೆ ಸಿಕ್ಕಿತು. ಅಕ್ಷರ ನೋಡಿದೊಡನೆಯೆ ಅವನಿಗೆ ಲಲಿತಳ ಜ್ಞಾಪಕ ಬಂತು. ರೋಮಾಂಚನವಾಯಿತು. ಪ್ರಣಯಭಾವಗಳ ಸುಳಿವಿಲ್ಲದ ಅವನ ಹೃದಯ ಉದ್ವಿಗ್ನ ವಾಯಿತು. ಲಲಿತ.... ನನ್ನ ಮುದ್ದು ಲಲಿತ!.... ಎಂದು ಉದ್ಗಾರ ತೆಗೆಯಿತು ಅವನ ಹೃದಯ ! ಕಾಗದವನ್ನು ಹತ್ತು ಬಾರಿ ಓದಿದ. ತನ್ನ ಕೆಲಸಕ್ಕೆ ಆಸ್ಪತ್ರೆಗೇನೋ ಹೋದ. ಆದರೆ ಅಂದು ಅವನ ಮನಸ್ಸೆಲ್ಲ ಲಲಿತೆಯ ಸುತ್ತ ಸುಳಿ ಯುತ್ತಿತ್ತು.

ರಮೇಶನಿಗೆ ಆ ತಿಂಗಳೆಲ್ಲ ತುಂಬ ಕೆಲಸವಿದ್ದುದರಿಂದ ಲಲಿತಳನ್ನು ಆಹ್ವಾನಿಸಿ ಕಾಗದ ಬರೆದ. ರಮೇಶನ ಕಾಗದ ವನ್ನು ಕಂಡು ಸಂತೋಷಗೊಂಡ ಲಲಿತೆ ನಾಲ್ಕು ದಿನಗಳ

ರಜಾ ಪಡೆದು ತೀರ್ಥಹಳ್ಳಿಗೆ ಹೋದಳು. ರಮೇಶನು ಗೊತ್ತು ಮಾಡಿದ್ದ ಆಳೊಬ್ಬನು ಲಲಿತಳ ಸಾಮಾನುಗಳನ್ನು ತೆಗೆದು ಕೊಂಡು ಹೋದನು. ರಮೇಶನು ಆಸ್ಪತ್ರೆಯಿಂದ ಇನ್ನೂ ಬಂದಿರಲಿಲ್ಲ. ರಮೇಶನ ವಿಧವೆಯಾದ ಚಿಕ್ಕಮ್ಮ ಆತ್ಮೀಯ ಸರಳಭಾವದಿಂದ ಲಲಿತಳನ್ನು ಉಪಚರಿಸಿದರು. ಮನೆಯು ಸಾಕಷ್ಟು ವಿಶಾಲವಾಗಿತ್ತು. ಲಲಿತ ಇಳಿದುಕೊಳ್ಳಲು ಒಂದು ಕೋಣೆಯನ್ನು ಸಜ್ಜುಗೊಳಿಸಿದ್ದರು. ಒಂದು ಮಂಚ, ಅದರ ಮೇಲೆ ಶುಭ್ರವಾದ ಹಾಸಿಗೆ, ಪಕ್ಕದಲ್ಲಿ ಒಂದು ಮೇಜು. ಅದರ ಮೇಲೆ ಕೆಲವು ಪುಸ್ತಕಗಳು, ಗೋಡೆಯ ಮೇಲೆ ಎರಡು ಪ್ರಕೃತಿ ಸೌಂದರ್ಯದ ಚಿತ್ರಗಳು. ಊದಿನ ಕಡ್ಡಿಯ ಹಿತಕರ ವಾದ ವಾಸನೆ ಅಲ್ಲಿ ತುಂಬಿತ್ತು.

ಒಂದು ಗಂಟೆಯ ಸಮಯಕ್ಕೆ ರಮೇಶನು ಬಂದನು. ಒಬ್ಬರನ್ನೊಬ್ಬರು ನೋಡಿ ಸಂತಸಗೊಂಡರು. ಅವರ ಹೃದಯ ದಲ್ಲಿ ಸುಪ್ತವಾಗಿದ್ದ ಪ್ರೇಮ ಉದ್ದೀಪನವಾಯಿತು. ಮಾತು ಬೇಗನೆ ಹೊರಡಲಿಲ್ಲ.

"ಏನಮ್ಮ ಪ್ರಯಾಣ ಸುಖಕರವಾಗಿತ್ತೆ ?"

"ನಿಮ್ಮನ್ನು ಕಾಣಲು ಬರುವಾಗ ಎಲ್ಲವೂ ಸುಖವೇ ಆಗಿರುತ್ತೆ !"

"ಊಟವಾಯಿತು ತಾನೆ !"

"ಇಲ್ಲ. ಬಂದಾಗ ನಿಮ್ಮ ಚಿಕ್ಕಮ್ಮ ತುಂಬಾ ತಿಂಡಿ ಕೊಟ್ಟರು. ಹೊಟ್ಟೆ ತುಂಬಿದೆ."

"ಆಗಲಿ, ಈಗ ನಾನು ತುಂಬಾ ಊಟ ಮಾಡಿಸುತ್ತೇನೆ" ಎಂದು ಹೇಳಿ ರಮೇಶನು ಊಟಕ್ಕೆ ಸಿದ್ಧವಾಗಲು ತನ್ನ ಕೋಣೆಗೆ ಹೋದನು.

ಸಂಜೆ ಆಸ್ಪತ್ರೆಯ ಕೆಲಸಗಳನ್ನು ಬೇಗನೆ ಮುಗಿಸಿ ರಮೇಶ ಮನೆಗೆ ಹಿಂತಿರುಗಿ ಲಲಿತಳನ್ನು ತುಂಗಾ ನದಿಯ ಸೌಂದರ್ಯವನ್ನು ತೋರಲು ಕರೆದುಕೊಂಡು ಹೋದನು. ರಮೇಶನ ಚಿಕ್ಕಮ್ಮ ಮನೆಯಲ್ಲಿ ಕೆಲಸವಿದ್ದುದರಿಂದ ಅವ ರೊಡನೆ ಬರಲಿಲ್ಲ. ಚಿಕ್ಕಮ್ಮನ ಇಬ್ಬರು ಹೆಣ್ಣುಮಕ್ಕಳು ಸಂಗೀತಪಾಠಕ್ಕೆ ಹೋಗಬೇಕಾದುದರಿಂದ ಅವರೂ ಬರಲಿಲ್ಲ. ರಮೇಶ ತುಂಗಾನದಿಯ ಮಧ್ಯೆ ರಾಮತೀರ್ಥವೆಂಬ ಸ್ಥಳವನ್ನು ತೋರಿಸಿ, ಜೋಗಿಗುಡ್ಡವೆಂಬ ಸ್ಥಳಕ್ಕೆ ಕರೆದೊಯ್ದನು. ಪ್ರಶಾಂತವಾದ ಸ್ಥಳ. ನದಿ ಮಂಜುಳರವದೊಡನೆ ಹರಿ ಯುತ್ತಿತ್ತು. ಸಂಜೆಯ ಸೂರ್ಯ ಹೊಂಬಣ್ಣವನ್ನು ಬೀರಿ ಮರೆಯಾಗುತ್ತಿದ್ದ. ದಡದಲ್ಲಿದ್ದ ಪಕ್ಷಿಗಳು ಚಿಲಿಪಿಲಿಗುಟ್ಟು ತ್ತಿದ್ದವು. ಸುಂದರ ಪ್ರಕೃತಿಯನ್ನು ನೋಡುತ್ತ ಅವರಿಬ್ಬರೂ ಬಂಡೆಯ ಮೇಲೆ ಕುಳಿತರು. ಸಂಜೆಯ ಬೆಳಗಿನಲ್ಲಿ ಲಲಿತೆ ದೇವತೆಯಂತೆ ಕಂಗೊಳಿಸಿದಳು. ರಮೇಶನಿಗೆ ಲಲಿತೆಯ ಚರಿತ್ರೆಯೆಲ್ಲ ತಿಳಿಯಿತು. ತನ್ನ ಕತೆಯನ್ನು ಹೇಳಿದ ಬಳಿಕ ಅವಳು ಬಿಕ್ಕಿಬಿಕ್ಕಿ ಅತ್ತುಬಿಟ್ಟಳು. ಅವಳನ್ನು ಸಂತೈಸಲು ಅವಳ ಹೆಗಲಮೇಲೆ ಕೈಹಾಕಲು ಮನಸ್ಸಾಯಿತು ರಮೇಶನಿಗೆ! ಆದರೆ ಅವಳು ಪರಪತ್ನಿಯೆಂಬ ಭಾವನೆ ಬಂದು, ಮನಸ್ಸನ್ನು ನಿಗ್ರಹಿಸಿದನು.

"ಬೇಡ, ಲಲಿತ ಅಳಬೇಡ. ಜೀವನದ ರೀತಿಯೇ ಹಾಗೆ. ಜಗತ್ತಿನಲ್ಲಿ ಯಾವುದೂ ಶಾಶ್ವತವಲ್ಲ. ಇನ್ನು ನೀನು ನನ್ನ ಜೊತೆಯಲ್ಲಿಯೆ ಇದ್ದುಬಿಡು. ನಾನೂ ನೀನೂ ಸೇರಿ ಒಂದು ವಿದ್ಯಾಸಂಸ್ಥೆಯನ್ನು ನಡೆಸೋಣ"

"ನಿಮ್ಮೊಡನೆ ಇದ್ದರೆ ನಾನು ನನ್ನ ಕಷ್ಟಗಳನ್ನು ಮರೆತು ಬಿಡುತ್ತೇನೆ. ಆದರೆ ಮಕ್ಕಳು ದೊಡ್ಡವರಾದ ಬಳಿಕ ಅವರು ನನ್ನ ಬಳಿ ಬರುವರೆಂಬ ಆಸೆ ಇದೆ. ನಿಮ್ಮ ಬಳಿ ಬಂದರೆ ಬಂಧುಬಾಂಧವರು ಏನು ಹೇಳುವರೊ ಎಂಬ ಹೆದರಿಕೆ ಬೇರೆ!"

"ಯೋಚನೆ ಮಾಡು ಲಲಿತ. ನನ್ನಿಂದ ಯಾವ ಸೇವೆ ಯಾಗಬೇಕಾದರೂ ಮಾಡಲು ಸಿದ್ಧನಿದ್ದೇನೆ. ನಿನ್ನ ಮದುವೆ ಯಾದ ಬಳಿಕ ನಿನ್ನನ್ನು ನೆನೆದು ದುಃಖಿಸಿ ಬಳಲಿದೆ. ಹೃದಯ ರೋಗವೂ ನನ್ನನ್ನು ಪೀಡಿಸಿತು. ಇನ್ನೂ ಅದರಿಂದ ಪಾರಾಗಲಿಲ್ಲ."

"ಅಯ್ಯೋ ದೇವರೆ, ನನ್ನಿಂದ ನಿಮಗೆಷ್ಟು ತೊಂದರೆ ಯಾಯಿತು. ಆ ರೋಗವನ್ನು ನಾನು ಹೇಗೆ ಹೋಗಲಾಡಿ ಸಲಿ!"

"ದೇವರ ಇಚ್ಛೆ ಹೇಗಿದೆಯೋ ಹಾಗಾಗುತ್ತದೆ. ನನಗೀಗ ನಲವತ್ತೈದು ವರ್ಷ. ಇನ್ನೂ ಹತ್ತು ವರ್ಷಗಳ ಕಾಲ ಉದ್ಯೋಗ ಮಾಡಬೇಕು. ಬೇರೆ ಕಡೆಗೆ ಹೋದರೂ ನಿವೃತ್ತ ನಾದ ಮೇಲೆ ಈ ತೀರ್ಥಹಳ್ಳಿಯಲ್ಲಿಯೇ ನೆಲಸೋಣ ಎಂದು ಯೋಚಿಸಿದ್ದೇನೆ. ಈಗ ಆರಂಭಿಸುವ ವಿದ್ಯಾಸಂಸ್ಥೆಗೆ ಪೂರ್ಣ ವಾಗಿ ಮನಸ್ಸುಕೊಡಲು ಆಗ ಸಾಧ್ಯ. ಈಗ ಅದರ ಕೆಲಸ ಗಳನ್ನು ನೀನೇ ನೋಡಿಕೋ. ನಿನ್ನ ಮಕ್ಕಳು ಬಂದರೆ ಬರಲಿ. ನೀನು ಪವಿತ್ರವಾಗಿದ್ದುಬಿಡು. ನಾವಿಬ್ಬರೂ ಸಾಧಕರಾಗಿ ನಮ್ಮ ಜೀವನ ಸಾಗಿಸೋಣ!"

"ನನಗೂ ಅದೇ ಸರಿ ಎಂದು ಕಾಣುತ್ತದೆ. ನಿಮ್ಮ ಸಾನ್ನಿಧ್ಯದಲ್ಲಿ ನನಗೆ ಸ್ಫೂರ್ತಿ ಬರುತ್ತದೆ. ನಮ್ಮ ಅಕ್ಕನಿಗೆ ಹೇಳಿ ಶಾಲೆಯ ಕೆಲಸವನ್ನು ಬಿಟ್ಟು ಇನ್ನು ಒಂದು ತಿಂಗ ಳಲ್ಲಿಯೇ ಬಂದುಬಿಡುತ್ತೇನೆ."

"ಚೆನ್ನಾಗಿ ಯೋಚನೆಮಾಡು. ನಿನ್ನ ಅಭ್ಯುದಯ ದಲ್ಲಿಯೇ ನನಗೆ ಆಸಕ್ತಿ."

ಕತ್ತಲಾಗುತ್ತಿತ್ತು ಅವರಿಬ್ಬರೂ ಮನೆಗೆ ಹೊರಟರು. ಅಂತಹ ಪ್ರಶಾಂತ ಸ್ಥಳವನ್ನು ಲಲಿತೆ ತನ್ನ ಜೀವಮಾನ ದಲ್ಲಿಯೆ ನೋಡಿರಲಿಲ್ಲ. ರಮೇಶನ ಹೃದಯರೋಗವನ್ನು ತಿಳಿದು ಅವಳ ಮನಸ್ಸು ಕರಗಿತ್ತು. ಅವನ ಮಾತುಗಳಲ್ಲಿ ಸಾಂತ್ವನವಿತ್ತು. ಆದರೆ ಅವಳಿಗೆ ಅವನ ಪ್ರೇಮವೂ ಬೇಕೆನಿ ಸಿತು. ರಮೇಶನ ನಿಗ್ರಹ ಜೀವನದಲ್ಲಿ ಅವಳಿಗೆ ಅಷ್ಟು ಆಸಕ್ತಿ ಕಾಣಲಿಲ್ಲ. ಅವನೊಡನೆ ಕೆಲಸಮಾಡುವುದೂ ಅವಳಿಗೆ ಪ್ರಿಯವಾಗಿ ಕಂಡಿತು. ಪ್ರೇಮದಿಂದ ತನ್ನನ್ನು ಕಾಣುವ ಸಂಗಾತಿಯ ಅವಶ್ಯಕತೆ ಇತ್ತು. ರಮೇಶ ಹಿಂದಿನಂತೆ ಆರೋಗ್ಯ ಯೌವನದಿಂದ ಕಂಗೊಳಿಸುತ್ತಿರಲಿಲ್ಲ. ಹೃದಯ ರೋಗದಿಂದ ಅವನು ಕುಗ್ಗಿದ್ದನು. ಮೂರುದಿನಗಳು ಶಾಂತವಾಗಿ ಕಳೆದುವು. ನಾಲ್ಕನೆಯದಿನ ಅವಳು ಬೆಂಗಳೂರಿಗೆ ಹೊರಟಳು.

ಬೆಂಗಳೂರಿಗೆ ಹೋದ ಬಳಿಕ ತೀರ್ಥಹಳ್ಳಿಗೆ ಹೋಗುವ ವಿಚಾರವನ್ನು ಲಲಿತ ತುಂಬ ಯೋಚಿಸಿದಳು. ಅವಳಿಗೆ ನಿರ್ಧಾರಕ್ಕೆ ಬರುವುದು ಬಹಳ ಕಷ್ಟವಾಯಿತು. ರಮೇಶನು ಅನೇಕ ಧಾರ್ಮಿಕ ಗ್ರಂಥಗಳನ್ನು ಕಳುಹಿಸಿದನು. ಅವುಗಳು ಲಲಿತಳಿಗೆ ಅಷ್ಟು ಪ್ರಿಯವಾದುವೆಂದು ಹೇಳುವಂತಿರಲಿಲ್ಲ.

ಒಂದುದಿನ ದೆಹಲಿಯಲ್ಲಿದ್ದ ಮಿಲಿಟರಿ ಆಫೀಸರೊಬ್ಬರು ಬೆಂಗಳೂರಿಗೆ ಬಂದರು. ಮಿತ್ರರಾದ ಲಲಿತಳ ಭಾವನ ಮನೆ ಯಲ್ಲಿಯೇ ಅವರು ತಂಗಿದರು. ಅವರಿಗೆ ನಲವತ್ತನಾಲ್ಕು ವರ್ಷ. ಸೈನ್ಯಶಾಲೆಯ ವ್ಯಾಯಾಮ, ಪುಷ್ಟಿಕರವಾದ ಆಹಾರ ಗಳಿಂದ ಅವರು ದೃಢಕಾಯರಾಗಿದ್ದರು. ಎತ್ತರವಾಗಿ, ಆರೋಗ್ಯ ವಾಗಿ ಸುಪುಷ್ಟವಾಗಿ ಸುಂದರವಾಗಿದ್ದ ಲಲಿತಳನ್ನು ನೋಡಿ ದೊಡನೆ ಆಫೀಸರ ಮನಸ್ಸು ಅವಳಲ್ಲಿ ಅನುರಕ್ತವಾಯಿತು. ಅವಳ ವಿಚಾರವನ್ನೆಲ್ಲ ತಿಳಿದು ಅವಳನ್ನು ಮದುವೆಯಾಗುವ ತಮ್ಮ ಉತ್ಕಟ ಅಭಿಲಾಷೆಯನ್ನು ಲಲಿತಳ ಭಾವನವರಿಗೆ ತಿಳಿಸಿದರು. ಅವರೂ ಮಿಲಿಟರಿ ಆಫೀಸರ ಮನಸ್ಸನ್ನು ತಿಳಿದು ಪ್ರೋತ್ಸಾಹವಿತ್ತರು. ಲಲಿತ ಡೈವೋರ್ಸ್ ಮಾಡಿ, ಆಫೀಸರನ್ನು ಮದುವೆಯಾಗುವುದೇ ಉತ್ತಮವೆಂದು ರಾಜೇಶ್ವರಿಯೂ ಭಾವಿ ಸಿದಳು. ಒಂದುದಿನ ಅವರೆಲ್ಲರೂ ಚಲನಚಿತ್ರವನ್ನು ನೋಡಲು ಹೋದರು. ಆಫೀಸರ್ ಕುಳಿತದ್ದು ಲಲಿತಳ ಪಕ್ಕದಲ್ಲಿಯೆ! ಅವರ ದೃಷ್ಟಿ ಚಲನಚಿತ್ರಕ್ಕಿಂತ ಲಲಿತಳ ಸೌಂದರ್ಯದ ಕಡೆಗೇ ಇತ್ತು. ಸುಪ್ತವಾಗಿದ್ದ ರತಿ ಆಕೆಯ ಹೃದಯದಲ್ಲೂ ಕೆರಳಿತ್ತು. ಚಿತ್ರಮಂದಿರದಿಂದ ಹೊರಬರುವಾಗ ಅವರು ಲಲಿತೆಯ ಹೃದಯ ವನ್ನು ಗೆದ್ದಿದ್ದರು.

ದೆಹಲಿಗೆ ಹೋಗುವ ಮೊದಲು ಎರಡು ಬೆಲೆ ಬಾಳುವ ರೇಷ್ಮೆ ಸೀರೆಗಳನ್ನು ತಮ್ಮ ಬಳಿ ಇದ್ದ ಅಮೆರಿಕನ್ ಬ್ಯಾಗಿ ನಲ್ಲಿಟ್ಟು ಲಲಿತೆಗೆ ಬಹುಮಾನವಾಗಿ ಕೊಟ್ಟು ಹೊರಟು ಹೋದರು.

ಅತ್ತ ರಮೇಶನ ಆರೋಗ್ಯ ಉತ್ತಮವಾಗುತ್ತಿತ್ತು. ಲಲಿತಳ ಸಾನ್ನಿಧ್ಯವೇ ಅವನ ಹೃದಯಕ್ಕೆ ಶಾಂತಿಯನ್ನು ನೀಡುವ ಭರವಸೆ ನೀಡಿತ್ತು. ಚಿಕ್ಕಂದಿನಿಂದಲೂ ಅವಳ ನಿರ್ಮಲ ಸ್ವಭಾವವನ್ನು ಸೌಂದರ್ಯವನ್ನೂ ಕಂಡು ಅವನು ಅವಳಲ್ಲಿ ಅನುರಕ್ತನಾಗಿದ್ದನು. ಅವನ ಜೀವಮಾನದಲ್ಲಿ ಮತ್ತೆ ಯಾವ ಸ್ತ್ರೀಯ ಕಡೆಗೂ ಅವನ ಮನಸ್ಸು ಹೋಗಲಿಲ್ಲ. ಲಲಿತೆಯನ್ನು ಸಂತೋಷವಾಗಿಡಬೇಕೆಂಬ ಭಾವನೆಯೆ ಅವನ ಮನಸ್ಸಿನಲ್ಲಿ ತುಂಬಿಹೋಗಿತ್ತು. ಅವಳ ಮಕ್ಕಳು ಬಂದರೆ ಅವರನ್ನು ಓದಿಸಬೇಕೆಂಬ ಭಾವನೆ ಅವನದು. ವಿಧವೆಯಾದ ಚಿಕ್ಕಮ್ಮನೂ ಅವರ ಹೆಣ್ಣುಮಕ್ಕಳಿಬ್ಬರೂ ಅವನ ಆಶ್ರಯ ದಲ್ಲಿಯೇ ಇದ್ದರು. ದೈವಭಕ್ತಳೂ ನಿರ್ಮಲ ಚರಿತ್ರಳೂ ಆದ ಚಿಕ್ಕಮ್ಮ ಮನೆಯನ್ನು ಚೆನ್ನಾಗಿ ನೋಡಿಕೊಂಡು ರಮೇಶನ ಆರೋಗ್ಯವನ್ನು ಚೆನ್ನಾಗಿ ನೋಡಿಕೊಳ್ಳುತ್ತಿದ್ದಳು. ಅವರಿಗೆ ಲಲಿತಳ ವಿಚಾರ ತಿಳಿದು ಅವಳಲ್ಲಿ ಸಹಾನುಭೂತಿ ಮೂಡಿತು. ಲಲಿತ ಮನೆಯಲ್ಲಿ ಬಂದಿರಲು ಅವರಿಗೆ ಒಪ್ಪಿಗೆಯೇ ಆಯಿತು. ಲಲಿತ ಬೆಂಗಳೂರಿಗೆ ಹೋದ ಪ್ರಾರಂಭದಲ್ಲಿ ಕಾಗದಗಳು ರಮೇಶನಿಗೆ ಬರುತ್ತಿದ್ದವು. ಮಿಲಿಟರಿ ಆಫೀಸರ್ ಅವಳ ಹೃದಯವನ್ನು ಗೆದ್ದಮೇಲೆ ಕಾಗದ ಬರುವುದೂ ನಿಂತು ಹೋಯಿತು.

ಅತ್ತ ಲಲಿತೆಗೆ ಆಫೀಸರ್ ಉಡುಗೊರೆಯ ಭಾಂಗಿಗಳನ್ನು ಕಳುಹಿಸಲು ಪ್ರಾರಂಭಿಸಿದರು. ಲಲಿತೆಯ ಮನಸ್ಸಿನಲ್ಲಿ ಮೊದ ಮೊದಲು ಘರ್ಷಣೆಯಾದರೂ ಆಫೀಸರರ ಪುಷ್ಟವಾದ ಮೈಕಟ್ಟು, ವಿನೋದಪ್ರಿಯತೆ. ತನ್ನಲ್ಲಿ ಅವರಿಟ್ಟ ಪ್ರೇಮಭಾವ- ಇವೆಲ್ಲವೂ ಅವಳ ಹೃದಯವನ್ನು ಕರಗಿಸಿದವು. ಅವರೊಡನೆ ಎಷ್ಟುಬೇಗ ವಿವಾಹವಾದರೆ ಅಷ್ಟು ಉತ್ತಮವೆಂದು ಅವಳು ಭಾವಿಸಿದಳು. ಡೈವೋರ್ಸ್ ಸಿಗುವುದು ಕಷ್ಟವಾದರೂ ಮಿಲಿಟರಿ ಆಫೀಸರ ಪ್ರಯತ್ನದಿಂದ ದೊರಕಿತು. ಮದುವೆಯ ದಿನವೂ ಹತ್ತಿರ ಬಂತು. ರಮೇಶನ ನೆನಪು ಬಂದು ಅವಳು ಅವನಿ ಗೊಂದು ಕಾಗದ ಬರೆದಳು.

ಪ್ರಿಯ ರಮೇಶ್,

ಈ ಕಾಗದ ನೋಡಿದರೆ ನೀವು ಏನೆನ್ನುತ್ತೀರೋ ತಿಳಿಯದು. ನನಗಿನ್ನೂ ಲೌಕಿಕ ಸುಖದ ಆಸೆ ಬಿಟ್ಟಿಲ್ಲ.

ನಿಮ್ಮಂತಹ ನಿರ್ಮಲ ವ್ಯಕ್ತಿಗಳನ್ನು ಸಂಸಾರಕ್ಕೆ ತಿರುಗಿಸಲು ಸ್ವಲ್ಪವೂ ಇಷ್ಟವಿಲ್ಲ. ಮುಂದಿನ ಶುಕ್ರವಾರ ಮಿಲಿಟರಿ ಆಫೀಸರೊಬ್ಬರನ್ನು ವಿವಾಹವಾಗುತ್ತೇನೆ. ನಿಮ್ಮ ಪ್ರೇಮ ಶುದ್ಧವಾದುದು, ಪವಿತ್ರವಾದುದು. ಅದು ನನ್ನ ಮನಸ್ಸಿನಲ್ಲಿಮರೆಯುವುದಿಲ್ಲ. ನಿಮಗೆ ಹೃತ್ಪೂರ್ವಕವಾದ ನನ್ನ ಕೃತಜ್ಞತೆಗಳು. ನಿಮ್ಮ ಆಶೀರ್ವಾದಗಳು ನಮ್ಮನ್ನು ರಕ್ಷಿಸಲಿ.

ನಮಸ್ಕಾರಗಳು

ಲಲಿತ

*        *        *        *

ಕಾಗದವನ್ನು ಎರಡು ಮೂರು ಸಾರಿ ರಮೇಶ ಓದಿದ. ಅದು ಲಲಿತಳ ಕಾಗದವೆಂದು ನಂಬುವುದೂ ಅವನಿಗೆ ಸಾಧ್ಯವಾಗಲಿಲ್ಲ. ಆದರೆ ಅವಳದೇ ಅಕ್ಷರ! ಅವಳದೇ ರುಜು! ಮಧ್ಯಾಹ್ನ ಮೂರು ಗಂಟೆಗೆ ಪತ್ರವನ್ನು ಹಿಡಿದು ಕುಳಿತವನು ನಾಲ್ಕು ಗಂಟೆಯಾದರೂ ರಮೇಶ ಏಳಲೇ ಇಲ್ಲ. ಸಾವಿರ ಗರಗಸಗಳು ಅವನ ಹೃದಯವನ್ನು ಒಂದೇಸಮನೆ ಕೊಯ್ಯುವಂತೆ ಕಾಣಿಸಿದುವು. ಲಲಿತ ಹೀಗಿರುವುದು ಸಾಧ್ಯವೇ ಇಲ್ಲ ಎನ್ನುತ್ತಿತ್ತು ಅವನ ಒಂದು ಭಾಗದ ಹೃದಯ ! ಮತ್ತೊಂದು ಭಾಗ ಸ್ತ್ರೀಯ ಬಯಕೆಯನ್ನು ತಿಳಿಯುವುದು ಕಷ್ಟ ಎನ್ನುತ್ತಿತ್ತು ! ಇವೆರಡೂ ಸೇರಿ ಅವನ ಹೃದಯದಲ್ಲಿ ಲಬ್ ಲಬ್ ಡಬ್ ಡಬ್... ....ಡಬ್ ಡಬ್ ಎಂದು ಹೊಡೆಯಲಾರಂಭಿಸಿದುವು. ಏಕೋ ಪಲ್ಸ್ ರೇಟ್ ಜಾಸ್ತಿಯಾಗಿರುವುದಲ್ಲ ಎಂದುಕೊಂಡ! ನಿಮಿಷಕ್ಕೆ ನೂರಾರುಸಾರಿ ಹೊಡೆಯುವಂತೆ ಅವನಿಗೆ ಭಾಸವಾಯಿತು. ಇದ್ದಕ್ಕಿದ್ದಂತೆ ಅವನ ಹೃದಯದ ಬಡಿತ ನಿಂತುಹೋಗುವಂತೆ ಅನಿಸಿತು. ಮೈ ಬೆವರಿತು.

ಐದು ಗಂಟೆಯಾದರೂ ರಮೇಶ ತನ್ನ ಕೊಠಡಿಯಿಂದ ಹೊರಬಾರದಿದ್ದುದನ್ನು ಕಂಡು ಅವನ ಚಿಕ್ಕಮ್ಮ ಅವನ ಕೊಠಡಿಯ ಬಳಿಗೆ ಬಂದು ಕೂಗಿದರು. ಅವನ ಉ... ಬರಲಿಲ್ಲ. ಅವನ ಹೃದಯ ನಿಂತುಹೋಗಿತ್ತು !

ಎರಡು ವರ್ಷಗಳು ಕಳೆದುವು. ಲಲಿತಳಿಗೆ ಮುದ್ದಾದ ಒಂದು ಮಗು ! ತನ್ನ ಎರಡನೆಯ ಪತಿಯೊಡನೆ ಲ... ಬೆಂಗಳೂರಿಗೆ ಬಂದಿದ್ದಳು. ಒಂದುದಿನ ದಂಪತಿಗಳು ಮ... ನೊಡನೆ ಮಾರ್ಕೆಟ್ಟಿನಿಂದ ತಮ್ಮ ಕಾರಿನಲ್ಲಿ ಹಿಂತಿರುಗು... ದ್ದಾಗ, ದಾರಿಯಲ್ಲಿ ರಮೇಶನ ಚಿಕ್ಕಮ್ಮನನ್ನು ಲಲಿತೆ ಕಂ... ಕಾರನ್ನು ನಿಲ್ಲಿಸಿ ಅವರನ್ನು ಕಾರಿನಲ್ಲಿ ಕುಳ್ಳರಿಸಿದಳು.

"ಏನು ಇಷ್ಟು ಸೊರಗಿದ್ದೀರಲ್ಲ. ನಿಮ್ಮ ಮನೆಗೆ ಬಿ... ಬರುತ್ತೇನೆ"

"ಅಷ್ಟು ತೊಂದರೆ ಏಕಮ್ಮ!"

"ತೊಂದರೆ ಏನೂ ಇಲ್ಲ. ಸಂತೋಷವಲ್ಲವೆ! ನೋ... ನನ್ನ ಮಗು ಶಾಂತಿ! ಇವರೇ ನನ್ನ ಯಜಮಾನರು" ಎಂ... ತನ್ನ ಪತಿಯ ಪರಿಚಯ ಮಾಡಿಸಿದಳು ಲಲಿತ.

"ಒಳ್ಳೆಯದಮ್ಮ, ನೀವು ಚೆನ್ನಾಗಿರಿ ಎಂದು ಆಶೀರ್ವ... ಸಿದರು ಚಿಕ್ಕಮ್ಮ.

ಸ್ವಲ್ಪ ದೂರ ಹೋಗುವುದರಲ್ಲಿ ರಮೇಶನ ಚಿಕ್ಕಮ... ನವರ ಮನೆ ಬಂದಿತು. ಕಾರನ್ನು ನಿಲ್ಲಿಸಿ ಮುಂದೆ ಹೊರಡು... ನೊದಲು,

"ಡಾಕ್ಟರ್ ರಮೇಶ್ ಅವರಿಗೆ ನನ್ನ ನಮಸ್ಕಾರಗಳನ್ನು ತಿಳಿಸಿ" ಎಂದಳು ಲಲಿತ.

"ಇಲ್ಲಮ್ಮ, ಎರಡು ವರ್ಷಗಳ ಹಿಂದೆ ಅವರು ಕಾ... ವಾದರು. ನಮಸ್ಕಾರ" ಎಂದು ಹೇಳಿ ಚಿಕ್ಕಮ್ಮ ಹೊರಟು ಹೋದರು.

ಲಲಿತಳ ಮನಸ್ಸಿನಲ್ಲಿ ಯಾತನೆಯ ಭಾವವೊಂದು ಹಾದುಹೋಯಿತು. ಅವಳು ಏನೋ ಹೇಳಬೇಕೆನ್ನುವಾಗ ಕಾರು ಮುಂದೆ ಓಡಿತು.

---

## ನೆಹರೂ ನುಡಿ

ಸುಖಭೋಗದ ಮನೋಧರ್ಮ ರಾಷ್ಟ್ರದ ವಿನಾಶಕ್ಕೆ ಮೊದಲಹೆಜ್ಜೆ. ಸುಖಭಾವನೆ ತಲೆದೋರುತ್ತಲೇ ದೇಶ ನಿರ್ಜೀವಿಯಾಗುತ್ತದೆ. ನಾವು ಎಚ್ಚರವಾಗಬೇಕಾದರೆ ಏನಾದರೂ ಅಪಾಯಗಳೂ, ಭಯಂಕರ ಸನ್ನಿವೇಶಗಳೂ ತಲೆಹಾಕುತ್ತಲೇ ಇರಬೇಕು. ಹೀಗಾದರೆ ಮಾತ್ರ ಮುಂಬರಿಯುವ ಅವಿಶ್ರಾಂತ ದುಡಿಮೆಗೆ ನಾವು ಟೊಂಕ ಕಟ್ಟುತ್ತೇವೆ. ಆಧುನಿಕ ಕಾಲಕ್ಕೆ ಅನುಗುಣವಾಗಿ ನಮ್ಮ ಪೂರ್ವಪದ್ಧತಿಗಳಲ್ಲಿ ಪರಿವರ್ತನೆಯಾಗಬೇಕು. ಅದಕ್ಕೆ ಮೊದಲಹೆಜ್ಜೆ ಜಾತೀಯತೆಯನ್ನು ತೊಡೆದುಹಾಕುವುದು. ಬಂಗಾರವಲ್ಲ, ಬೆಳ್ಳಿಯಲ್ಲ ನಮ್ಮ ಐಶ್ವರ್ಯ. ನಮ್ಮ ಜನಶಕ್ತಿಯೇ ನಮ್ಮ ಐಶ್ವರ್ಯ. ಪ್ರತಿಯೊಬ್ಬನ ಮನೋಭಾವ ಉದಾತ್ತ ಧ್ಯೇಯ ಇವುಗಳ ಸಾಧನೆಗೆ ಪಡುವ ಶ್ರಮವನ್ನನುಸರಿಸಿ ದೇಶ ಪ್ರಗತಿಹೊಂದುವುದು.

# ಭಿಕ್ಷುಕರು

ಸಂಗೀತ ವಿದ್ವಾನ್ ಟಿ. ವಿ. ಮುತ್ತಾಚಾರ್ಯ,
ಬಿ.ಎ.(ಆನರ್ಸ್), ಬಿ.ಇಡಿ.

ಭಿಕ್ಷುಕರ ಬೀಡು ಭರತಖಂಡ. ಭಿಕ್ಷುಕರಿಲ್ಲದ ನಗರವಿಲ್ಲ, ಪಟ್ಟಣವಿಲ್ಲ, ಊರಿಲ್ಲ, ಹಳ್ಳಿಯಿಲ್ಲ. ರೈಲು ಬಸ್ಸು ನಿಲ್ದಾಣಗಳಲ್ಲಿ, ಕೋರ್ಟು-ಕಛೇರಿಗಳ ಹತ್ತಿರದಲ್ಲಿ, ನಾಟಕ, ಸಿನಿಮಾ ಮಂದಿರಗಳ ಬಳಿಯಲ್ಲಿ, ಸಂತೆ, ಜಾತ್ರೆಗಳಲ್ಲಿ ಅವರು ಜನರಿಗೆ ಸರ್ವದಾ ಪ್ರತ್ಯಕ್ಷರಾಗಿರುತ್ತಾರೆ.

ಯಾತ್ರಾಸ್ಥಳಗಳಲ್ಲಂತೂ ಮೊದಲು ಈ ದರಿದ್ರನಾರಾಯಣರ ದರ್ಶನವಾಗದೆ ದೇವರ ದರ್ಶನ ಸಾಧ್ಯವೇ ಇಲ್ಲ. ಯಾವುದೇ ಯಾತ್ರಾಸ್ಥಳದ ಮಹತ್ವವನ್ನು ಅದಕ್ಕೆ ಮುತ್ತಿಗೆ ಹಾಕಿರುವ ಭಿಕ್ಷುಕರ ಸಂಖ್ಯೆಯೇ ನಿರ್ಧರಿಸಿ ಬಿಡುವುದೆಂದು ಹೇಳಬಹುದು. ಬೆಲ್ಲದ ಬಾಸಿಗೆ ಸಾಲಿಕ್ಕಿ ನಡೆಯುವ ಇರುವೆ ಗೊದ್ದಗಳಂತೆ ಬೆಟ್ಟದ ಸೋಪಾನಗಳ ಎರಡು ಮಗ್ಗುಲಲ್ಲೂ ಭಿಕ್ಷುಕರು ಸಾಲುಗಟ್ಟಿ ಕುಳಿತಿರುವುದು ಯಾತ್ರಿಕರ ಕಣ್ಣಿಗೆ ಒಂದು ಅಪೂರ್ವ ದೃಶ್ಯವೇ ಸರಿ. ಕುಂಟ, ಕುರುಡ, ಹೆಳವ, ಕುಬ್ಜರೇ ಮೊದಲಾದ ಅಂಗವಿಕಲರ ರೋಧನಾತ್ಮಕ ಮಹಾ ಸಮ್ಮೇಳನದಂತೆ ಕಾಣುವ ಈ ದಾರುಣ ದೃಶ್ಯ ಎಲ್ಲರಿಗಿಂತ ಹೆಚ್ಚಾಗಿ ಯಾತ್ರಿಕರ ಮಕ್ಕಳನ್ನು ಆಕರ್ಷಿಸಿ ಅವರ ಎದೆಯ ಮರುಕವನ್ನು ಕೆರಳಿಸುವುದು.

ಬೆಟ್ಟದ ದೇವರ ದೇವಾಲಯದ ಗರ್ಭಗುಡಿಯಲ್ಲಿ ಕೇಳಿಸುವ ಪೂಜಾಕಾಲದ ಮಂತ್ರಘೋಷಕ್ಕೆ ಮುನ್ನನೇ ಯಾತ್ರಿಕನೂ ಈ ಭಿಕ್ಷುಕರ ಆರ್ತನಾದವನ್ನು ಕೇಳಬೇಕು. ಭಕ್ತರಿಗೋ ಬೆಟ್ಟದ ಮೇಲಿನ ದೇವರ ಚಿಂತೆ. ಅರಬೆತ್ತಲೆಯ ಮೈ, ಹೊರಗೆದ್ದ ಮೂಳೆ, ಎಣ್ಣೆಯ ಮುಖವನ್ನೇ ಕಾಣದ ಕುರುಚಲು ಕೂದಲಿನ ತಲೆ ಬೇಡಲೆಂದೇ ಹುಟ್ಟಿರುವುವೋ ಎಂಬಂತಿರುವ ಕೈ-ಹೃದಯವಿದ್ರಾವಕವಾದ ಈ ಕರುಣಾಜನಕ ದೃಶ್ಯದಿಂದ ಅನೇಕ ಭಕ್ತರು ಗಿರಿಯ ಹರಿಯನ್ನು ಮರೆತು ತಿರುಕರಲ್ಲಿ ಮರುಕಗೊಂಡು ಕಾಣಿಕೆ ತೆತ್ತು ಕರುಣೆಯನ್ನು ಮೆರೆಯುವರು.

ಭಿಕ್ಷಾವೃತ್ತಿಯನ್ನು ಕೀಳೆಂದು ಭಾವಿಸುವವರಿಗೆ ಅದು ಕೀಳಾದುದಲ್ಲ ಎಂದು ಸಿದ್ಧಮಾಡಿ ತೋರಿಸಬಹುದು ! ದಿಗಂಬರನಾಗಿ ನರಕಪಾಲವನ್ನು ಹಿಡಿದು ನಮ್ಮ ಶಿವ ಭಿಕ್ಷಾವೃತ್ತಿಯನ್ನು ಅವಲಂಬಿಸಿಲ್ಲವೇ? ದೇವದೇವನಾದ ಮಹೇಶ್ವರನೇ ಈ ವೃತ್ತಿಯನ್ನು ಕೈಗೊಂಡಿರುವುದೆಂದಮೇಲೆ ಭಿಕ್ಷಾವೃತ್ತಿಯನ್ನು ಕೀಳೆಂದು ಏಕೆ ಭಾವಿಸಬೇಕು ? ಪುರಂದರ, ಕನಕಾದಿ ದಾಸಕೂಟ ಮಹನೀಯರೆಲ್ಲಾ ಭಿಕ್ಷಾವೃತ್ತಿಯವರೇ ಆಗಿರಲಿಲ್ಲವೇ ? 'ಬೇಡಿದವರಿಗೆ ನೀಡದಿದ್ದರೆ ತಲೆದಂಡ' ಎಂದು ಸಾರುತ್ತ ಜಂಗಮ ಸೇವೆ ಮಾಡುತ್ತಿದ್ದ ಭಗವಾನ್ ಬಸವೇಶ್ವರನ ಶರಣ ಸಂಕುಲವೆಲ್ಲಾ ಭಿಕ್ಷೆಗೆ ಕೈ ಒಡ್ಡುತ್ತಿರಲಿಲ್ಲವೇ ? ತಮ್ಮ ಜೀವಿತ ಅವಧಿಯಲ್ಲಿ ಶ್ರೀರಾಮಚಂದ್ರನನ್ನು ಪ್ರತ್ಯಕ್ಷ ಮಾಡಿಕೊಂಡು ಧನ್ಯರಾದ ಗಾನಯೋಗಿ ತ್ಯಾಗಯ್ಯನವರೂ ಸಹ ತಂಬೂರಿ ಮೀಟಿಕೊಂಡು ಬೀದಿ ಬೀದಿಯ ಮನೆ ಮನೆಗಳನ್ನು ಸುತ್ತುತ್ತ ಭಿಕ್ಷೆಬೇಡಿ ಜೀವಿಸಲಿಲ್ಲವೇ ? ಇಂತಹ ಮಹನೀಯರ ಆದರ್ಶ ತಮ್ಮ ಕಣ್ಣು ಮುಂದಿರುವುದರಿಂದಲೇ ಭಿಕ್ಷಾವೃತ್ತಿಯ ಬೆನ್ನುಹತ್ತಿರುವವರ ಸಂಖ್ಯೆ ದಿನೇ ದಿನೇ ಅಧಿಕವಾಗಿ ಬೆಳೆಯುತ್ತಿರುವುದೆಂದು ಹೇಳಬಹುದು.

ಇನ್ನು ಭಿಕ್ಷುಕರ ವೇಷ ಭೂಷಣಗಳ ವಿಚಾರ : ಭಿಕ್ಷುಕರು ಧರಿಸುವ ವೇಷ ಭೂಷಣಗಳು ಬಹು ವಿಚಿತ್ರ. ವೇಷ ಧರಿಸುವುದರಲ್ಲಿ ಅವರು ತೋರಿಸುವ ಕಲೆಗಾರಿಕೆ ಅದ್ಭುತ. ಅವರ ಭಾಷೆ ಮತ್ತು ಮಾತಿನ ಧ್ವನಿ ಮತ್ತೂ ವಿಚಿತ್ರ. ಇದಕ್ಕೆ ಉದಾಹರಣೆ ನಮ್ಮ ಬುಡುಬುಡಿಕೆಯವನು. ಅವನು ಭಿಕ್ಷುಕ ಸಾಮ್ರಾಜ್ಯದ ಸಾಮ್ರಾಟನೆಂದೇ ನನ್ನ ಅಭಿಪ್ರಾಯ. ಏಕೆಂದರೆ ಇವನಷ್ಟು ಅಂದಚಂದದ ವಿಲಕ್ಷಣಕಾರಕವಾದ ಉಡುಪನ್ನು ಧರಿಸುವ ರಾಜಠೀವಿಯ ಭಿಕ್ಷುಕ ಬೇರೊಬ್ಬನಿಲ್ಲ. ಅವನ ಆಪಾದಮಸ್ತಕ ವರ್ಣರಂಜಿತ ಅಲಂಕಾರ ಬಹು ಮನೋಜ್ಞ ಹಾಗೂ ಮನೋರಂಜಕ. ಅವನು ಸುತ್ತುವ ಪೇಟ ನಮ್ಮ ನಾಡಿನ ಯಾವ ಮಾದರಿಯ ಪೇಟವನ್ನೂ ಹೋಲದೆ ತನ್ನದೇ ಆದ ಮೂಲ ಪ್ರತಿಷ್ಠೆಯನ್ನು ಪಡೆದಿದೆ. ಜಗತ್

ಪ್ರಸಿದ್ಧವಾದ ಮೈಸೂರು ರುಮಾಲಿಗೂ ಇಲ್ಲ, ಇವನ ಪೇಟದ 'ಶ್ರೀಮದ್ ಗಾಂಭೀರ್ಯ'. ಅವನ ಪೇಟಕ್ಕಾಗಲಿ, ಉತ್ತರೀಯಕ್ಕಾಗಲಿ ಗಂಡಸರ ಬಟ್ಟೆಯೇ ಆಗಬೇಕೆಂಬ ನೀತಿನಿಯಮಗಳೇನೂ ಇಲ್ಲ. ಅದು ಬಿಳಿಯ ಅಥವಾ ಬೇರೆ ಬೇರೆ ಬಣ್ಣದ ಪಂಚೆಯೋ ದುಪ್ಪಟಿಯೋ ಆಗಿರಬಹುದು; ಹಾಸಿಗೆಯ ಮೇಲೆ ಹಾಕುವ 'ಬೆಡ್-ಷೀಟ್' ಆಗಬಹುದು! ಹೊದೆಯುವ ಶಾಲಾಗಿರಬಹುದು! ಕೊನೆಗೆ ಹೆಂಗಸರ ಹರುಕು ಸೀರೆಯಾದರೂ ಸರಿಯೇ, ಅವನು ಲಿಂಗಭೇದ ತೋರಿಸುವುದಿಲ್ಲ, ಈ ಭಿಕ್ಷುಕಸಾಮ್ರಾಟ ಭಿಕ್ಷೆ ಬೇಡುವಾಗ ಮುಖದಲ್ಲಿ ಸಾಮಾನ್ಯವಾಗಿ ದೈನ್ಯಭಾವವನ್ನು ತೋರಿಸುವುದು ಅಪರೂಪ. ಅವನ ಮೀಸೆ ಹುರಿಗಿರಿಜಾ ಮೀಸೆಯ ಜರ್ಬನ್ನೂ ಹಿಂದಿಕ್ಕುತ್ತದೆ.

ಕತ್ತೆಗೆ ನೃತ್ಯ ಹೇಳಿಕೊಡಬಹುದು. ಕೋಣಕ್ಕೆ ವೀಣೆ ಕಲಿಸಬಹುದು. ಹೆಗ್ಗಣಕ್ಕೆ ಮುಗ್ಗಿ ಹೇಳಕೊಡಬಹುದು. ಆದರೆ ಬುಡುಬುಡಿಕೆಯವನಿಗೆ ಭಿಕ್ಷೆ ಕೊಡದೆ ಮುಂದಕ್ಕೆ ಕಳುಹಿಸುವ ಒಂದು ಕೆಲಸ ಮಾತ್ರ ಅಸಾಧ್ಯ.

ಅವನ ಮಾತಿನ ವೈಖರಿಯಲ್ಲಿ ಕಂಡುಬರುವ ಕೆಲವು ವಿಚಿತ್ರ ಶಬ್ದಗಳಿಗೆ ಪಂಡಿತರೂ ಕೂಡ ಅರ್ಥ ವಿವರಣೆ ನೀಡಲು ಸಮರ್ಥರಲ್ಲ. ಅವನು ತೆಲುಗು ಮಿಶ್ರಿತ ಕನ್ನಡ ಭಾಷೆಯ ತದ್ಭವ ಶಬ್ದಗಳ ಉಚ್ಚಾರಣೆಯನ್ನು ಅವನ ಬಾಯಿಂದಲೇ ಕೇಳಬೇಕು. ಅವುಗಳ ಉಚ್ಚಾರಣೆ ಹೇಗಿರಬೇಕೆಂಬುದಕ್ಕೆ ಅವನೇ ನಿಜವಾದ ಆಧಾರ (Authority) ಲಚ್ಚಿಮಿ (ಲಕ್ಷ್ಮಿ) ನಾರೇಣ (ನಾರಾಯಣ) ಮುಂತಾದ ತದ್ಭವ ಶಬ್ದಗಳ ಉಚ್ಚಾರಣೆಯನ್ನು ಕೇಳಿ ನಲಿಯದಿರುವ ಕನ್ನಡಿಗರಾರು ? ನಮ್ಮ ಶಾಲಾ ವಿದ್ಯಾರ್ಥಿಗಳು ಇಂತಹ ತದ್ಭವ ಶಬ್ದಗಳ ಉಚ್ಚಾರಣೆಯನ್ನು ಕಲಿಯಲು ಬುಡುಬುಡಿಕೆಯವನ ಸ್ನೇಹ ಮಾಡುವುದು ಮೇಲು.

ವೈಣಿಕರು ತಮ್ಮ ವೀಣೆಯನ್ನು ಸರಸ್ವತಿಯಿಂದಲೂ, ವೇಣುವಾದಕರು ತಮ್ಮ ಕೊಳಲನ್ನು ಕೃಷ್ಣಪರಮಾತ್ಮನಿಂದಲೂ, ಮೃದಂಗವಾದಕರು ತಮ್ಮ ಮೃದಂಗವನ್ನು ನಂದಿಯಿಂದಲೂ, ತಾಳವನ್ನು ಬ್ರಹ್ಮನಿಂದಲೂ ಪಡೆದು ಶ್ರದ್ಧಾಭಕ್ತಿಗಳಿಂದ ಕಲಿತು ವಾದನಮಾಡುವಂತೆ ಬುಡುಬುಡಿಕೆಯವ[illegible] ಬುಡುಬುಡಿಕೆಯನ್ನು ಯಾವ ದೇವರಿಂದ ಪಡೆದು [illegible] ಮುತ್ತಾನೆಂಬುದನ್ನು ಸಂಶೋಧಕರು ತಿಳಿಸಬೇಕಾ[illegible] ವೀ[illegible]ಣೆ, ವೇಣು, ಮೃದಂಗ ಮುಂತಾದ ವಾದ್ಯಗಳನ್ನು ಎಲ್ಲರೂ ಕಲಿಯಲು ಸಾಧ್ಯ. ಆದರೆ ಬುಡುಬುಡಿಕೆಯನ್ನು ಎಲ್ಲರೂ ಕಲಿಯಲು ಸಾಧ್ಯವೇ ? ಅದನ್ನು ಅವನೇ ನುಡಿಸಬೇಕು. ಇವನಲ್ಲದೆ ಇನ್ನಾವ ಲಯವಾದ್ಯ ಧುರೀಣನ[illegible] ಇದನ್ನು ನುಡಿಸಲು ಸಮರ್ಥನೇ ಅಲ್ಲ ! 'ಸಾಗರಕ್ಕೆ ಸಾ[illegible]ರವೇ ಉಪಮೆ, ಗಗನಕ್ಕೆ ಗಗನವೇ ಉಪಮೆ' ಎಂಬಂತೆ ಬುಡುಬುಡಿಕೆಗೆ ಬುಡಬುಡಿಕೆಯೇ ಉಪಮೆ–ಆ ವಾದನ[illegible] ಆ ವಾದನವೇ ಉಪಮೆ. ದಿನ ಬಳಕೆಯಲ್ಲಿಲ್ಲದ ಇವನ [illegible]ಕ್ಷಣ ರಾಗಪೂರ್ಣ ವಾಕ್ ಚಾತುರ್ಯಕ್ಕೆ ಇವನ [illegible] ಬುಡಿಕೆ ಇವನಿಗೆ ಒಂದು ಸ್ಫೂರ್ತಿದಾಯಕ ಪಕ್ಕವ[illegible] ಶ್ರೋತೃಗಳನ್ನು ಮರುಳುಗೊಳಿಸಿ ತಲೆದೂಗಿಸುವ [illegible] ವಚನ ಶೈಲಿಗೆ ಮರುಳಾಗದ ದಾನಿಗಳೂ ಬಹುವಿರಳ.

'ಸಂತೋಷಂ ಜನಯೇತಾ ಪ್ರಾಜ್ಞಃ ತದೇವೇ[illegible] ಪೂಜನಂ' ಇತರರಿಗೆ ಸಂತೋಷವನ್ನು ಉಂಟುಮಾಡು[illegible] ಈಶ್ವರ ಪೂಜೆ ಎಂದರ್ಥ 'ನಕ್ಕುನಲಿ' (Laugh and [illegible] Merry) ಎಂಬುದು ಇಂಗ್ಲೀಷಿನ ಒಂದು ಸೂಕ್ತಿ. ಭಿಕ್ಷು[illegible]ರಂತೆ ಜನರನ್ನು ನಕ್ಕುನಲಿಯುವಂತೆ ಮಾಡುವವಾರು ಮತ್ತಾರಿರುವರು ? ತಮ್ಮ ವಿಲಕ್ಷಣವಾದ ಉಡಿಗೆ, ತೊಡಿಗೆಗಳಿಂದ, ವಿಚಿತ್ರವಾದ ಉಕ್ತಿವೈಖರಿಗಳಿಂದ ನಮಗೆ ಎಂತಹ ನೇತ್ರಾನಂದವನ್ನೂ, ಕರ್ಣಾನಂದವನ್ನೂ ಉಂಟುಮಾಡುತ್ತಾರೆ ! ಅವರ ನೃತ್ಯಗೀತಗಳೂ, ಆಟಪಾಟಗಳೂ, ವಿವಿಧಭಾಷೆಯ ಸಂಗಮವೆನಿಸಿದ ಮಾತುಕತೆಗಳೂ ನಗದವರನ್ನೂ ಕೂಡ ನಗಿಸಬಲ್ಲವು. ಎಷ್ಟೋ ಜನ ಸುಶಿಕ್ಷಿತ ನಾಗರೀಕರು ತಮ್ಮ ಶಿಕ್ಷಣಸಂಸ್ಥೆಗಳಲ್ಲಿ ಇಂತಹ ಕಲಾರಸಿಕ ಭಿಕ್ಷುಕರನ್ನು ಅನುಸರಿಸಿ ವಿವಿಧ ವೇಷ ಸ್ಪರ್ಧೆಯಲ್ಲಿ (Fancy-Dress) ಭಾಗವಹಿಸಿ ಮನೋರಂಜನೆ ನೀಡಿ ಚಪ್ಪಾಳೆ ಗಿಟ್ಟಿಸಿಕೊಂಡು ಬಹುಮಾನ ಪಡೆದು ಭೇಷ್ ಎನಿಸಿಕೊಂಡು ಕಲಾವಿದ ಪಟ್ಟವನ್ನು ಪಡೆದು ಹರ್ಷಿಸುವುದನ್ನು, ಯಾರು ನೋಡಿಲ್ಲ. ನಮ್ಮ ಕಲಾರಸಿಕ ಭಿಕ್ಷುಕವೃಂದವೇ ಸ್ಫೂರ್ತಿಯಲ್ಲವೇ ?

ಉತ್ತಮ ಪ್ರಜೆ ಎನಿಸಿಕೊಳ್ಳಲು ಅತ್ಯಗತ್ಯವಾದ ಅನೇಕ ಗುಣಗಳನ್ನೂ ನಾವು ಭಿಕ್ಷುಕರಿಂದ ಕಲಿಯಬಹುದು. ಇವುಗಳಲ್ಲಿ ಮುಖ್ಯವಾದ ಗುಣವೆಂದರೆ ಅವರ ಸಹನಶೀಲತೆ ಅಥವಾ ತಾಳ್ಮೆ. ತಾಳ್ಮೆಯ ಗುಟ್ಟನ್ನು ಅರಿತ ಮಹಾತ್ಮರೇ ಭಿಕ್ಷುಕರು. (ತಾಳ್ಮೆಯ ಗುಟ್ಟನ್ನು ಅರಿತ ಭಿಕ್ಷುಕರೇ ಮಹಾತ್ಮರೆಂದು ಹೇಳಿದರೆ ಮತ್ತೂ ಚೆನ್ನ.) ಮನೆಮನೆಗಳಲ್ಲಿ ಮುನಿದು ಮೇಲೆ ಬೀಳುವ ಕೆಂಗಣ್ಣಿನ ಮುಂಗೋಪಿಗಳನ್ನೂ ಮನಮರುಗಿ ಮಮತೆಯಿಂದ ಭಿಕ್ಷೆಯೀವ ಮುಗುಳ್ನಗೆಯ ಮಹಾತ್ಮರನ್ನೂ ಕಂಡಿರುವ ಅವರು ಎರಡು ಬಗೆಯವರನ್ನೂ ಏಕಪ್ರಕಾರ ಎದುರಿಸಿ ಕಹಿ-ಸಿಹಿಗಳನ್ನು ಏಕಪ್ರಕಾರವಾಗಿಯೇ ಪರಿಗ್ರಹಿಸುವಷ್ಟು ಪರಮಾವಧಿ ತಾಳ್ಮೆಯನ್ನು ಪಡೆದಿರುತ್ತಾರೆ.




# ನಮ್ಮ ರಾಷ್ಟ್ರೀಯತೆ

★ "ಓ! ಭಾರತೀಯ! ಕನ್ನಡಿಗ!
ಏನಿದು ನಿನ್ನ ಬೇಸರದ ನುಡಿ?
ಸಾಕಿನ್ನು, ಗಂಡಾಗು ಮತ್ತೆ!"

★ "ಎದ್ದೇಳಿ, ಎಚ್ಚರರಾಗಿ, ಗುರಿ
ತಲುಪುವ ಮುನ್ನ ವಿಶ್ರಮಿಸಬೇಡಿ"

ಶ್ರೀ ಐ. ಎಸ್. ಶಿವಣ್ಣ, ಬಿ.ಎಸ್‌ಸಿ., ಎಂ.ಇಡಿ.,
ಟೀಚರ್ಸ್ ಟ್ರೈನಿಂಗ್ ಸೆಂಟರ್, ಮುಂಬಯಿ-೩೩

ಆಗಸ್ಟ್ ೧೫, ೧೯೪೭ ಭಾರತದ ಇತಿಹಾಸದಲ್ಲಿ ಒಂದು ಸುವರ್ಣ ಪುಟ; ಚಿರಸ್ಮರಣೀಯ ಪುಣ್ಯ ದಿನ. ಶತಮಾನಗಳಿಂದ ಭಾರತದಲ್ಲಿ ಮನೆಮಾಡಿಕೊಂಡಿದ್ದ ದಾಸ್ಯವು ಅಂತ್ಯಗೊಂಡ ಸುದಿನವದು. ವಿಶ್ವದ ಒಂದು ಸನಾತನ ದೇಶವು ಸ್ವತಂತ್ರವಾದ ದಿನ. ಭಾರತವು ರಾಜಕೀಯ ಸ್ವಾತಂತ್ರ್ಯವನ್ನು ಪಡೆದು ಹದಿನೇಳು ವರ್ಷಗಳು ಮುಗಿದುವು. ಕೆಲವು ಘಟನೆಗಳನ್ನು ಇಲ್ಲಿ ನೆನಪು ಮಾಡಿಕೊಳ್ಳಬೇಕು. ಭಾರತದ ಬಿಸ್ಮಾರ್ಕ್ ಎಂದು ಕರೆಸಿಕೊಂಡ ಸರದಾರ ವಲ್ಲಭಾಯ್ ಪಟೇಲರು ೧೯೪೮ ರಲ್ಲಿ ಭಾರತದಲ್ಲಿದ್ದ ಸಣ್ಣ ಪುಟ್ಟ ರಾಜರುಗಳ ಆಡಳಿತವನ್ನು ಕೊನೆಗಾಣಿಸಿ, ಭಾರತದ ಐಕ್ಯತೆಗೆ ಬುನಾದಿ ಹಾಕಿದರು. ನಮ್ಮ ರಾಷ್ಟ್ರೀಯತೆಯು ಉದಯವಾದುದು ಇಲ್ಲಿಯೇ. ೧೯೫೦ ರಲ್ಲಿ ಭಾರತವು ಇನ್ನೊಂದು ಹೆಜ್ಜೆ ಮುಂದಿಟ್ಟಿತು. 'ಜಾತ್ಯಾತೀತ ಗಣರಾಜ್ಯ' ವೆಂದು ಭಾರತವು ಘಟನಾತ್ಮಕವಾಗಿ ಘೋಷಿಸಿತು. ಈ ರಾಜಕೀಯ ಮತ್ತು ಭೌಗೋಲಿಕ ಸಂಘಟನೆಗಳ ಹಿನ್ನೆಲೆಯೇ ನಮ್ಮ 'ರಾಷ್ಟ್ರೀಯ ಭಾವೈಕ್ಯತೆ' ಎಂಬುದನ್ನು ಮರೆಯಬಾರದು. ಈಗ ನಾವು ೪೩ ಕೋಟಿ; ವಿಶ್ವದ ಜನ ಸಂಪತ್ತಿನಲ್ಲಿ ೦·೭ ಪಾಲು !! ಭಾರತೀಯರಾದ ನಾವು ೧೬ ಪ್ರಾಂತ್ಯಗಳಲ್ಲಿ ಹಂಚಿಹೋಗಿದ್ದೇವೆ. ನಮ್ಮೆಲ್ಲರ ಆಸೆ, ಆಕಾಂಕ್ಷೆ, ಗುರಿ ಎಲ್ಲವೂ "ಭಾರತದ ಭದ್ರತೆ" ಯೇ ಆಗಿದೆ; ಇದು ನಿರ್ವಿವಾದವಾದುದು. ಆದರೆ ನಮ್ಮೆಲ್ಲರ 'ನಡೆ' ಎತ್ತ ಸಾಗಿದೆ? ಎತ್ತ ಸಾಗಿಹೋಗಬೇಕಾಗಿದೆ? ಎಂಬುದನ್ನು ಸ್ಪಷ್ಟಪಡಿಸುವುದೇ ಈ ಲೇಖನದ ಮೂಲ ಉದ್ದೇಶ.

ಭಾರತವು ಅನಾದಿಕಾಲದಿಂದಲೂ ಒಂದು ರಾಷ್ಟ್ರವಾಗಿಯೇ ಬೆಳೆದು ಬಂದಿದೆ. ರಾಷ್ಟ್ರವೆಂದರೆ ವಿಸ್ತಾರವಾಗಿರುವ ದೇಶ ಎಂದಲ್ಲ; ಅಗಾಧವಾದ ಜನಸಂಖ್ಯೆಯಿರುವ ಭೂಭಾಗವೂ ಎಂದಲ್ಲ. "ಒಂದು ನಿರ್ದಿಷ್ಟ ಭಾವನೆಯುಳ್ಳ ಮಾನವ ವರ್ಗ"ಕ್ಕೆ ರಾಷ್ಟ್ರ ಎನ್ನಬೇಕು. ಭಾರತೀಯ ರಾಷ್ಟ್ರೀಯತೆಯು ಅಪೂರ್ವವಾದುದು; ಸನಾತನವಾದುದು; ವಿಶ್ವಕ್ಕೆ ಮಾರ್ಗದರ್ಶನ ನೀಡುವಂತಹುದು. ನಿಜ, ಭಾರತದಲ್ಲಿ ಶತ ಶತಮಾನಗಳಲ್ಲೂ ವಿವಿಧ ಭಾಗಗಳಲ್ಲಿ ಬೇರೆ ಬೇರೆ ರಾಜ್ಯಗಳಿದ್ದವು. ವಿವಿಧ ಆರ್ಥಿಕ ವ್ಯವಸ್ಥೆಗಳಿದ್ದವು. ಭಿನ್ನ ಭಿನ್ನ ಮತೀಯರು ಪ್ರಬಲರಾಗಿದ್ದ ಭಾಗಗಳಿದ್ದುವು. ಆದರೆ ಅವರ ಉದಾರವಾದ ಧಾರ್ಮಿಕ ಪ್ರವೃತ್ತಿ, ತತ್ವಚಿಂತನೆ, ಸಾಹಿತ್ಯ ರಚನೆ, ಕಲಾನೈಪುಣ್ಯ, ಸಾಮಾಜಿಕ ಮತ್ತು ಆರ್ಥಿಕ ಕಟ್ಟುಪಾಡುಗಳು— ಇವೆಲ್ಲವೂ ನಿರ್ಲಿಪ್ತವಾದ ಭಾರತದ ಅಖಂಡತ್ವವನ್ನು ಎಂದೂ ಮರೆತಿಲ್ಲ. ಭಾರತದ ಮುನಿಪುಂಗವರು, ಧರ್ಮ ಪ್ರಚಾರಕರು, ಸಾತ್ವಿಕರು, ಸಮಾಜ ಸುಧಾರಕರು ತಮ್ಮ ಕಾರ್ಯ ಕ್ಷೇತ್ರದಲ್ಲಿ ಇಡೀ ಭಾರತದಲ್ಲೇ ಪ್ರಸಿದ್ಧಿಯಾದವರು. ಏಕೆಂದ[illegible] ವರ ಭಾವನೆಗಳು ಅಖಂಡ ಭಾರತಕ್ಕೆ ಸಮನ್ವಯವಾ[illegible] ಬುದ್ಧ, ಬಸವ, ಶಂಕರ, ವಿವೇಕಾನಂದ, ಗಾಂಧಿ—[illegible]ವಾ ಭಾರತದ ಬೇರೆ ಬೇರೆ ಭಾಗಗಳಲ್ಲಿ ಜನಿಸಿದ್ದರೂ ಅವರ ತತ್ವಚಿಂತನೆ, ಸಮಾಜ ಸುಧಾರಣೆ, ಅವರ ಭಾವನೆಗಳು ಅಖಂಡ

ಭಾರತಕ್ಕೇ ಬೇಕಾದವುಗಳು. ಅವರದು ವಿಶ್ವವಾಣಿ; ನಿತ್ಯ ಸತ್ಯ. ವೇದಗಳು, ಉಪನಿಷತ್, ರಾಮಾಯಣ, ಮಹಾ ಭಾರತ, ಭಗವದ್ಗೀತೆ—ಇವೆಲ್ಲವೂ ಭಾರತದ ಅಖಂಡತ್ವಕ್ಕೆ ಅಡಿಗಲ್ಲು. ಅವು ಭಾರತೀಯ ಸಂಸ್ಕೃತಿಯ ವಿವಿಧ ಮುಖಗಳೇ ಹೊರತು, ಭಾರತದ ಒಂದು ಭಾಗದ ಜೀವನ ಧರ್ಮವನ್ನು ಕುರಿತು ಹೇಳುವುದಿಲ್ಲ. ಭಾರತದ ಸಂವಿಧಾನವೂ ಧಾರ್ಮಿಕ ಐಕ್ಯತೆಯನ್ನು ಪ್ರತಿಬಿಂಬಿಸುತ್ತದೆ; ಸರ್ವ ಧರ್ಮಗಳನ್ನೂ ಅದು ಮನ್ನಿಸಿದೆ. ಹೀಗೆ ಭಾರತದಲ್ಲಿ ಭಾವೈಕ್ಯತೆಯು ಅನಾದಿ ಕಾಲದಿಂದಲೂ ಚೇತನಯುಕ್ತವಾಗಿಯೇ ಇದೆ. ಆದರೆ ಇತ್ತೀಚಿನ ರಾಜಕೀಯ ಶಕ್ತಿಗಳು ಭಾರತದ ರಾಷ್ಟ್ರೀಯತೆಯನ್ನೂ ಸಡಲಿಸಲು ಪ್ರಯತ್ನಿಸಿ ಅಲ್ಪ ಯಶಸ್ವಿಯಾಗಿದೆ.

೧೯೫೭ ನೇ ಇಸವಿಯ ಒಂದು ಘಟನೆಯು ನಮ್ಮ ರಾಷ್ಟ್ರೀಯತೆಯ ಚರಿತ್ರೆಯನ್ನೇ ಬದಲಾಯಿಸಿತು. ಇದು "ಅತ್ಯಂತ ದುರದೃಷ್ಟಕರ" ಎನ್ನದೆ ಇರಲಾಗದು. ಇದೆಲ್ಲಾ ರಾಜಕಾರಣಿಗಳ ಕೈವಾಡ; ಸ್ವಾರ್ಥಿಗಳ, ಅಧಿಕಾರ ದಾಹವುಳ್ಳ ಗುಂಪಿನ ದೃತ್ಯ ವರ್ತನೆ; ಬಹು ಸಂಖ್ಯಾ ಜನ ಬಲವುಳ್ಳ ವರ್ಗದ ಹುಚ್ಚು. ರಾಜ್ಯ ಪುನರ್ಘಟನೆಯು ಭಾಷಾವಾರು ಪ್ರಾಂತ್ಯಗಳ ರಚನೆಯ ಹಾದಿಯಲ್ಲಿ ನಡೆಯಿತು. ಅಂದೇ ನಮ್ಮ ರಾಷ್ಟ್ರೀಯತೆಯ ಅವನತಿಯು ಆರಂಭವಾಯಿತು. "ನಾವು" ಎನ್ನುವ ಬದಲು 'ನಾನು' ಎನ್ನುವುದು ಮೊದಲಾಯ್ತು. ರಾಜ್ಯಗಳ ಗಡಿ ಸಮಸ್ಯೆಗಳು, ಶಿಕ್ಷಣ ಗೊಂದಲ, ರಾಷ್ಟ್ರ ಭಾಷೆಯ ವಿವಾದ, ಅಧಿಕಾರ ಲೋಲುಪ್ತತೆ, ಅಲ್ಪ ಸಂಖ್ಯಾಂತರ ಹಿತರಕ್ಷಣೆ, ಅಂತರ ರಾಜ್ಯ ಸರ್ವೀಸ್ ಕಾಯಿದೆಗಳಲ್ಲಿ ಅಸಮತ್ವ, ಭೂ ಮಾಲಿಕತ್ವದಲ್ಲಿ ಅನಿರ್ದಿಷ್ಟತೆ, ರಾಜಕೀಯ ಪಕ್ಷಗಳ ಘರ್ಷಣೆ, ಆರ್ಥಿಕ ಅಸಮಾನತೆ, ಮೊದಲಾದವುಗಳು ತೀವ್ರವಾಗಿ ಕಾಣಿಸಿಕೊಂಡವು. ಬೃಹತ್ ಭಾರತದ ಮಟ್ಟದಲ್ಲಿ ಇವು ನಡೆಯಬೇಕಾದವುಗಳೆಂದು ಪೂರ್ವಭಾವಿಯಾಗಿ ವಿಧಾಯಕವಾಗಿದ್ದರೂ ಪ್ರಾಂತ್ಯಗಳವರು ತಮಗೆ ಬೇಕಾದುದನ್ನು ಜಾರಿಗೆ ತಂದರು; ಬಹು ವಿಚಾರಗಳನ್ನು ತೂರದೇ ಬಿಟ್ಟರು. ಇಂತಹ ರಾಷ್ಟ್ರೀಯ ವಿರುದ್ಧ ಚಟುವಟಿಕೆಗಳಿಗೆ, ನಮ್ಮಲ್ಲಿ ಅಂಕುರಿಸಿದ ಪ್ರಾಂತೀಯ ಭಾವನೆಯೇ, ಮುಖ್ಯ ಕಾರಣ. ನಾವು ಪ್ರಥಮತಃ ಭಾರತೀಯರು; ಅನಂತರ ಕರ್ನಾಟಕದವರು; ತದನಂತರ ಶ್ರೀ ಸಿದ್ಧಗಂಗಾ ಕ್ಷೇತ್ರದವರು—ಇಂಥಾ ಉದಾತ್ತ ಭಾವನೆಗಳು ನಮ್ಮಲ್ಲಿ ಮೂ- ಮವಾದುದೇ ನಮ್ಮಲ್ಲಿ ರಾಷ್ಟ್ರೀಯ ಭಾವೈಕ್ಯತೆ ಇಲ್ಲದೇ ಹೋಗಿರಲು ಮುಖ್ಯ ಕಾರಣವಾಗಿದೆ.

ಇದರ ಪರಿಣಾಮಗಳು ಊಹಿಸಲಾಗದಷ್ಟು ಘೋರವಾಗಿವೆ. ಪ್ರಾಂತ್ಯ ರಾಜ್ಯ ಮಟ್ಟದಲ್ಲಿನ ರಾಜಕೀಯ ಪಕ್ಷಗಳ ಅಧಿಕಾರಮೋಹ, ಹೊಂದಾಣಿಕೆ ಇಲ್ಲದ ಮತ್ತು ಕಕ್ಕಾಬಿಕ್ಕಿಯಾದ ಕೇಂದ್ರ ಸರ್ಕಾರ, ದೇಶದಲ್ಲಿ ಶ್ರೀಮಂತ ರೈತ ಮತ್ತು ವ್ಯಾಪಾರಿಗಳ ಒಳಸಂಚು-ಇವೆಲ್ಲಾ ದೇಶದ ಒಳಶತ್ರುಗಳಾಗಿ ಪರಿಣಮಿಸಿವೆ. ಪಾಕೀಸ್ಥಾನ ಮತ್ತು ಚೀನಾ ದೇಶಗಳ ಕೋಟಲೆಗಳು, ಪಾಶ್ಚಾತ್ಯ ರಾಷ್ಟ್ರಗಳ ಕಪಿಮುಷ್ಠಿಯ ರಾಜಕೀಯ—ಇವೆಲ್ಲಾ ದೇಶದ ಹೊರ ಶತ್ರುಗಳಾಗಿವೆ. ಊರಿಗೆ "ಮಾರಿ ಮತ್ತು ಪ್ಲೇಗು" ಇಬ್ಬರೂ ಜೊತೆಯಾಗಿ ಬಂದರು ಎಂಬಂತೆ, ಈ ಶತ್ರುಗಳ ಜೊತೆಗೆ ದೇಶದಲ್ಲಿ ಎಂದೂ ಇಲ್ಲದ ದರಿದ್ರಾವಸ್ಥೆ ತಲೆದೋರಿದೆ. ಜನಬಲ, ನಿಸರ್ಗ ಸಂಪತ್ತು, ಸಾಮಾಜಿಕ ಪರಂಪರೆ—ಇವನ್ನು ಹೊಂದಿರುವ ಸರ್ವಸ್ವತಂತ್ರ ರಾಷ್ಟ್ರವೆನಿಸಿಕೊಂಡ ಭಾರತವು ತನ್ನ ಜನರಿಗೆ ಅನ್ನ, ಅರಿವೆ, ಆಶ್ರಯ—ಜೀವನದ ಈ ಮೂಲ ಸೌಕರ್ಯಗಳನ್ನು ಒದಗಿಸುವ ಮಾತಿರಲಿ, ಕಳೆದ ೧೭ ವರ್ಷಗಳಿಂದಲೂ ತನ್ನ ಪ್ರಜೆಗಳ ಆಹಾರಕ್ಕಾಗಿ ಬೇರೆ ದೇಶವನ್ನು ಭಿಕ್ಷೆ ಕೇಳುತ್ತಿರುವುದು ನಾಚಿಕೆಗೇಡು! ಇದು ರಾಷ್ಟ್ರದ ದೌರ್ಬಲ್ಯ. ನಮ್ಮ ರಾಷ್ಟ್ರೀಯತೆಯ ಅಡಿಪಾಯಕ್ಕೇ ಮೃತ್ಯು. ಹಸಿದವನಿಗೆ ನೀತಿ ನಿರ್ಧಾರವಿರುವುದಿಲ್ಲ. ಕೊನೆಗೆ ದೇಶದ ಸ್ವಾತಂತ್ರ್ಯಕ್ಕೂ ಸಂಚಕಾರ ಬಂದೀತು. ಮುಂದಿನ ಪರದಾಸ್ಯವು ಮರಣಕ್ಕಿಂತಲೂ ಅಸಹನೀಯವಾದುದು. ನಾವು ಮಾತಿನಲ್ಲಿ ಮುಂದು; ಕೆಲಸದಲ್ಲಿ ಹಿಂದು; ವಾದದಲ್ಲಿ ಅಗ್ರಗಣ್ಯರು; ಜೀವನದಲ್ಲಿ ನಂಬಿಕೆಯಿಲ್ಲದವರು; ಗತವೈಭವ, ವಿಲಾಸಗಳನ್ನು ಕುರಿತು ಯೋಚಿಸುವವರೇ ವಿನಃ, ಇಂದಿನ ಸಮಸ್ಯೆಗಳನ್ನು ಬಗೆಹರಿಸುವ ಸ್ವಪ್ರಯತ್ನ ಮಾಡುವವರಲ್ಲ. ಹಕ್ಕು ಬಾಧ್ಯತೆಗಳಿಗೆ ಹೊಡೆದಾಡುವಂತೆ, ಜವಾಬ್ದಾರಿಗಳಿಗೆ ಬಡಿದಾಡುವುದಿಲ್ಲ. ನಮಗೆ ಮುಖ್ಯವಾಗಿ ಸಂಯಮ ಬೇಕು. ನಿತ್ಯ ಜೀವನದಲ್ಲಿ ಆದರ್ಶವಿರಬೇಕು. ಆದರ್ಶದಿಂದ ಸ್ಫೂರ್ತಿಯುಂಟಾಗುತ್ತದೆ; ತಕ್ಕ ಮಾರ್ಗದರ್ಶನದಲ್ಲಿ ಸ್ಫೂರ್ತಿಯು ಸರ್ವಚೇತನವಾಗಿ ಪರಿಣಮಿಸಿ, ಕಾರ್ಯೋನ್ಮುಖರಾಗಿ ನಾವು ಜಯಶೀಲರಾಗುವೆವು. ಇದಕ್ಕೆ ನಮ್ಮ 'ನುಡಿ-ನಡೆ' ಎರಡೂ ಜೀವನದಲ್ಲಿ ಒಂದಾಗಬೇಕು. ಅದುತನಕ ನಾವು ಏನನ್ನೂ ಸಾಧಿಸಲಾರೆವು.

ನಮ್ಮಲ್ಲಿ ರಾಷ್ಟ್ರೀಯತೆ ಬೆಳೆದಿಲ್ಲ; ಅದು ಅತ್ಯವಶ್ಯಕ, ಎಂದಾಯ್ತು. ಬೆಕ್ಕಿನ ಕತ್ತಿಗೆ ಗಂಟೆ ಕಟ್ಟುವ ಧೀರನಾರು ?-ಎಂದು ಸಮಸ್ಯೆಯ ರೀತಿಯಲ್ಲಿ ಅದನ್ನು ಹಾಗೆಯೇ ಇನ್ನು ಖಂಡಿತ ಬಿಡಬಾರದು. ಇದಕ್ಕೆ ಒಂದೇ ನೇರ ಮಾರ್ಗವಿರುವುದು. ಭಾರತೀಯರಲ್ಲಿ ರಾಷ್ಟ್ರೀಯತೆ ಮೂಡಿ ಬರಬೇಕಾದರೆ

ಅವರಿಗೆ ರಾಷ್ಟ್ರೀಯ ಪದ್ಧತಿಯಲ್ಲಿ ಶಿಕ್ಷಣವು ದೊರಕುವಂತೆ ಮಾಡುವುದೇ ಆಗಿದೆ. ಶಿಕ್ಷಣದಲ್ಲಿ ಹಿಂದುಳಿದಿರುವ ಯಾವ ದೇಶವೂ ಮುಂದುವರಿಯಲಾರದು. ಏಕೆಂದರೆ ದೇಶದಲ್ಲಿ ಉತ್ತಮ ಆಡಳಿತವರ್ಗ, ಆಗು ಹೋಗುಗಳ ವೀಕ್ಷಣೆ, ದೇಶದ ಸಂಪತ್ತಿನ ಸಂವೃದ್ಧಿ, ಸಮಾಜಿಕೋನ್ನತಿ, ಅಭಿವೃದ್ಧಿ ಯೋಜನೆಗಳ ಯಶಸ್ಸು—ಇವೆಲ್ಲಾ ಕಾಣಬೇಕೆಂದರೆ ಜನರು ರಾಷ್ಟ್ರದ ರೀತಿ ನೀತಿಗಳನ್ನೂ ಅರಿತಿರಬೇಕು; ರಾಷ್ಟ್ರದ ನಿರ್ಮಾಣ ಕಾರ್ಯದಲ್ಲಿ ಜನರ ಸಹಕಾರ ಬೇಕು; ಅವರ ಸಹಾಯ ಅನಿವಾರ್ಯ. ಶಿಕ್ಷಿತ ಜನರಿಲ್ಲದೆ ಸ್ವತಂತ್ರ ಸಮಾಜದ ಸೃಷ್ಟಿ ಹೇಗಾದೀತು? ಹೀಗೆ ಉತ್ತಮ ಶಿಕ್ಷಣವನ್ನು ಜನತೆಗೆ ದೊರಕಿಸುವುದರ ಮೂಲಕ, ನಾವು "ಭಾರತೀಯ ಜನಾಂಗ" ಎಂಬ ಭಾವೈಕ್ಯತೆಯು ಪ್ರಾರಂಭವಾಗುವುದು. ಶಿಕ್ಷಣ ಸಂಸ್ಥೆಗಳಲ್ಲಿ ಮುಖ್ಯವಾದುವುಗಳು—ಕುಟುಂಬ, ಶಾಲೆ, ಸಮಾಜ ಮತ್ತು ಸರ್ಕಾರ. ಇವು ದೇಶದಲ್ಲಿ ಒಗ್ಗಟ್ಟಿನಿಂದ ಕೆಲಸಮಾಡಿ ಜನರಲ್ಲಿ ರಾಷ್ಟ್ರೀಯತೆಯನ್ನು ಕಾಪಾಡಬಲ್ಲ ಶಕ್ತಿ ಹೊಂದಿವೆ. ಇವು ಪರಸ್ಪರ ಹೊಂದಿಕೊಂಡು ಕೆಲಸಮಾಡಬೇಕು. ಅವು ಏಕಮುಖವಾಗಿ ಕೆಲಸಮಾಡಿದಷ್ಟು ಪರಿಣಾಮ ಉತ್ತಮ ಮಟ್ಟದ್ದಾಗಿರುವುದು. ಅವುಗಳ ಸಂಬಂಧವು ಎಳ್ಳಷ್ಟೂ ವಿರುದ್ಧವಾಗಿರಕೂಡದು. ಅವುಗಳ ಕಾರ್ಯರಂಗದ ವ್ಯಾಪ್ತಿಯನ್ನು ನಿರ್ಧರಿಸೋಣ.

ಮಕ್ಕಳ ಭಾವನೆಗಳನ್ನು ಸಂಸ್ಕರಿಸಿ, ಅವರಲ್ಲಿ ಯೋಗ್ಯವಾದ ವ್ಯಕ್ತಿತ್ವವನ್ನು ಮೂಡಿಸುವುದರಲ್ಲಿ ಕುಟುಂಬದ ಪಾತ್ರ ಅಷ್ಟಿಷ್ಟಲ್ಲ. ಮಗುವೇ ಕುಟುಂಬದಲ್ಲಿ ಪ್ರಧಾನ ವಸ್ತು; ತಂದೆ-ತಾಯಿಗಳು, ಇತರ ಬಂಧುಗಳು ಎಲ್ಲರೂ ಅದರ ರಕ್ಷಕರು. ಮೇಲಾಗಿ ಮಗುವಿನ 'ಮೊದಲ ಗುರು ತಾಯಿ; ಮೊದಲ ಶಾಲೆ ಮನೆ',—ಇದು ನಿತ್ಯಸತ್ಯ. ಮಗು-ಮಾತೆ ಇವರ ಸಂಬಂಧವು ಅತ್ಯಂತ ಮಹತ್ವವಾದ ಘಟ್ಟ. ಇವರ ಸಂಬಂಧವು ಪರಸ್ಪರ ಅರಿವು ಎಷ್ಟು ಮಧುರವಾಗಿರುವುದೋ, ಮಗುವಿನ ವ್ಯಕ್ತಿತ್ವವು ಅಷ್ಟು ಸುಂದರವಾಗಿ ರೂಪಿತವಾಗುವುದು. ಮಗುವನ್ನು ಅಕ್ಕರೆಯಿಂದ ಬೆಳೆಸುವುದು ತಾಯಿಯ ಮುಖ್ಯ ಕರ್ತವ್ಯ; ತಂದೆಯದೂ ಮುಖ್ಯ, ಆದರೆ ಮೊದಲನೆಯವಕ್ಕೆ ಗೌಣ. ತಾಯಿಯು ಮಗುವಿನ ಮನೋಭಾವನೆಗಳಿಗನುಸಾರವಾಗಿ ವರ್ತಿಸಬೇಕು. ಮಗುವಿನ ಆರೋಗ್ಯಭಾಗ್ಯ, ಉದ್ರೇಕವಿಲ್ಲದ ಮನಸ್ಸನ್ನು ಸ್ಥಿರಗೊಳಿಸುವುದು, ಧಾರ್ಮಿಕ ಭಾವನೆಗಳ ಸಂವೃದ್ಧಿ, ಆಟಗಳಲ್ಲಿ ಮಮತೆ, ಶೀಲೋನ್ನತಿ, ಅಭಿಪ್ರಾಯ ಮನ್ನಣೆ—ಮೊದಲಾದ ಮಗುವಿನ ವ್ಯಕ್ತಿತ್ವದ ಮುಖಗಳನ್ನು ತಕ್ಕ ವಿಧಾನಗಳಿಂದ ಪೋಷಿಸಬೇಕು. ತಾಯಿಯ ಮಮತೆಯು ಕುಂಠಿತವಾದ ಮಗುವು, ಮುಂದೆ ಪ್ರೌಢನಾದಾಗ, ಉತ್ತಮ ವ್ಯಕ್ತಿತ್ವವನ್ನು ಪ್ರದರ್ಶಿಸುವುದಿಲ್ಲ. ಈ ಎಲ್ಲ ದೃಷ್ಟಿಯಿಂದ ರಾಷ್ಟ್ರದಲ್ಲಿ ಹೆಣ್ಣುಮಕ್ಕಳ ವಿದ್ಯಾಭ್ಯಾಸವು ಉತ್ತಮ ದರ್ಜೆಯದಾಗಿರಬೇಕು. ಸಾಕಷ್ಟು ಶಿಕ್ಷಿತ ಮಾತೆಯು ಮಾತ್ರ ಕುಟುಂಬದಲ್ಲಿ ಆದರ್ಶವನ್ನು ಹೊಂದಿದ್ದು, ಮಕ್ಕಳ ವ್ಯಕ್ತಿತ್ವಕ್ಕೆ ಉತ್ತಮ ಅಡಿಪಾಯವನ್ನು ಹಾಕಬಲ್ಲಳು.

ಕುಟುಂಬ ಜೀವನವು ಮುಂದುವರಿದು, ಸುಲಕ್ಷಣಗಳಿಂದ ಕೂಡಿದ ಮಗುವು ಶಾಲಾಜೀವನದಲ್ಲಿ ಕಾಲಿರಿಸುವುದು. ಇದು ಮಗುವಿನ ಜೀವನದಲ್ಲಿ ಅತ್ಯಂತ ಅಭಿವೃದ್ಧಿಯ ಕಾಲ. ಅದರ ದೈಹಿಕ ಮತ್ತು ಮಾನಸಿಕ ಶಕ್ತಿಗಳು ಪಕ್ವವಾಗುವ ಕಾಲ. ಈ ಗುಪ್ತಶಕ್ತಿಗಳು ಚೇತನಗೊಂಡಂತೆಲ್ಲಾ, ಶಾಲೆಯ ಜೀವನವು ಮಗುವಿನಲ್ಲಿ ಉತ್ತಮ ವ್ಯಕ್ತಿತ್ವವು ರೂಪುಗೊಳ್ಳುವಂತೆ ಮಾಡುತ್ತದೆ. ಶಾಲೆಯ ವಿಸ್ತೃತ ಜೀವನವು ಮಗುವಿಗೆ ಒಂದು ಪುಟ್ಟ ಪ್ರಪಂಚವಿದ್ದಂತೆ. ಸಮಾನ ವಯಸ್ಸಿನ ಇತರ ಮಕ್ಕಳು ಅದರ ಜೊತೆಗಾರರು; ಸಹೋದರತ್ವ, ಸ್ಫೂರ್ತಿ, ಅನುಕರಣೆ, ಅನುತಾಪ, ಸಂಯಮ, ಜ್ಞಾನಾರ್ಜನೆ ಮೊದಲಾದ ಉನ್ನತ ಗುಣಗಳು ಮಗುವಿನಲ್ಲಿ ವರ್ಧಿಸುತ್ತವೆ. ಶಾಲೆಯಲ್ಲಿ ದೊರಕುವ ಇತರ ಸೌಲಭ್ಯಗಳು—ಆಟಗಳು, ಚಟುವಟಿಕೆಗಳು, ಕಸುಬುಗಳು, ಪುಸ್ತಕಗಳು-ಇವೆಲ್ಲಾ ಮಗುವಿನ ನೈತಿಕ ಮತ್ತು ಆಧ್ಯಾತ್ಮಿಕ ಜೀವನಕ್ಕೆ ತಳಹದಿಯಾಗುತ್ತವೆ. ಇದು ಸಹಬಾಳ್ವೆಗೆ ನಾಂದಿ. ತನ್ನ ಸುಖವನ್ನು ಸಮಾಜದ ಸುಖದಲ್ಲಿ ಕಾಣುವ ಹಂಬಲ ಮಗುವಿನಲ್ಲಿ ಹೆಚ್ಚುವುದು. ಮಗುವು ನಿಸ್ವಾರ್ಥ ಬುದ್ಧಿಯನ್ನು ಹೊಂದಿ, 'ತಾನೂ ಬದುಕಿ, ಇನ್ನೊಬ್ಬರನ್ನೂ ಬದುಕಿಸುವ' ಮಾರ್ಗಾವಲಂಬಿಯಾಗುವುದು. ಅದರ ಸ್ವಾವಲಂಬನೆಯು ಹೆಚ್ಚಿ, ಸ್ವತಂತ್ರ ವಾತಾವರಣದ ಜವಾಬ್ದಾರಿಯನ್ನು ಅರಿತುಕೊಳ್ಳುವುದು. ತನ್ನ ಶಾಲೆಯನ್ನು, ತನ್ನ ಶಾಲೆಯ ಆದರ್ಶ ಮತ್ತು ಕಾಯಿದೆಗಳನ್ನೂ ಗೌರವಿಸುವುದು; ತನ್ನ ಮಾರ್ಗದರ್ಶಕ ಶಿಕ್ಷಕರನ್ನೂ ಪ್ರೀತಿವಿಶ್ವಾಸಗಳಿಂದ ನೋಡುವುದು. ಶಾಲೆಯ ಮೇಲೆ ಅದರ ಮಮತೆಯು ಹೆಚ್ಚಿ, ಅದನ್ನು ತನ್ನದೆಂದು ತಿಳಿದು, ಶಾಲಾಭಿಮಾನವನ್ನೂ ಬೆಳೆಸಿಕೊಳ್ಳುವುದು. ಇಂಥ ಶಾಲಾಭಿಮಾನವೇ ಮುಂದೆ ದೇಶಾಭಿಮಾನವಾಗಿ ಪರಿವರ್ತಿತವಾಗುವುದು; ಇದೇ ರಾಷ್ಟ್ರೀಯತೆಗೆ ಅಂಕುರಾರ್ಪಣ. ಈಗ, 'ಶಾಲೆಯಂತೆ ಮಗು'—ಎಂಬುದನ್ನೂ ನಾವು ಒಪ್ಪುತ್ತೇವೆ. ಈ ದೃಷ್ಟಿಯಲ್ಲಿ ಭಾರತದ ಶಾಲೆಗಳು-ಅದರಲ್ಲೂ ಪ್ರಾಥಮಿಕ ಶಾಲೆಗಳು-ಮಕ್ಕಳ ಪುರೋಭಿವೃದ್ಧಿ ಸಾಧಿಸುವ ಜೀವಂತ ಶಾಲೆಗಳಾಗಬೇಕು; ಬರಿ ಅಕ್ಷರ ವಿದ್ಯೆ ಅಥವಾ ಕಸುಬಿನ ಕೇಂದ್ರಗಳಾಗಬಾರದು. ಪಾಠಶಾಲೆಗಳಲ್ಲಿ ಮಕ್ಕಳ ರಕ್ಷಕನಾದ ಶಿಕ್ಷಕನು ಆದರ್ಶ ವ್ಯಕ್ತಿಯಾಗಿರಬೇಕು. ಮಕ್ಕಳು

ಅವನಲ್ಲಿನ ಎಲ್ಲವನ್ನೂ ಅನುಕರಿಸುವರು ; ಹೀಗೆ ಶಿಕ್ಷಕನ ಪ್ರಭಾವವು ಮಕ್ಕಳ ಮೇಲೆ ಅಸಾಧಾರಣವಾದುದು. ಮೊದಲು ಶಿಕ್ಷಕನು ರಾಷ್ಟ್ರಪ್ರೇಮವನ್ನು ಪ್ರದರ್ಶಿಸಬೇಕು. ಇದು ಆರಂಭವಾಗುವುದು, ಮಕ್ಕಳ ಭಾವನೆಗಳನ್ನು ಗೌರವಿಸಿ, ಅವನ್ನು ತಕ್ಕ ಸನ್ನಿವೇಶದಲ್ಲಿ ಸಂಸ್ಕರಿಸುವುದರಲ್ಲಿ. ಮಕ್ಕಳಲ್ಲಿ ಮಮತೆಯಿಲ್ಲದ, ಶಾಲೆಯ ಮೇಲೆ ಅಭಿಮಾನವಿಲ್ಲದ ವ್ಯಕ್ತಿಯು ಶಿಕ್ಷಕನೆನಿಸುವುದಿಲ್ಲ, ಅವನು ಭಕ್ಷಕನೇ ಸರಿ.

ಭಾರತದಲ್ಲಿ ಶಿಕ್ಷಣ ಪದ್ಧತಿಯು ಒಂದು ಕೃತಕ ಹಾಗೂ ಅಚಾತುರ್ಯದ ಹಾದಿಯಲ್ಲಿ ನಡೆದಿದೆ. ಕುಟುಂಬದ ವಾತಾವರಣಕ್ಕೂ ಶಾಲಾ ಜೀವನಕ್ಕೂ ಅಷ್ಟಾಗಿ ಹೊಂದಾಣಿಕೆ ಕಂಡುಬರುವುದಿಲ್ಲ. ಪೋಷಕರು ಶಾಲೆಗೆ ಬರುವುದುಂಟು ; ಶಿಕ್ಷಕರು ಪೋಷಕರ ಬಳಿಗೆ, ಕುಟುಂಬಗಳಿಗೆ ಹೋಗಿ ಬಂದುದುಂಟೆ? ಇಲ್ಲಿಯೇ ನಮ್ಮ ಶಿಕ್ಷಣ ಪದ್ಧತಿಯು ಮುಗ್ಗರಿಸಿರುವುದು. ಮಗುವಿನ ವ್ಯಕ್ತಿತ್ವವನ್ನು ರೂಪಿಸಲು ಜವಾಬ್ದಾರಿ ಹೊತ್ತ ಶಿಕ್ಷಕನು ಮಗುವಿನ ಕುಟುಂಬದ ಚರಿತ್ರೆ, ಮಗುವು ಬೆಳೆಯುತ್ತಿರುವ ಸನ್ನಿವೇಶ, ಸ್ವತಂತ್ರ ವಾತಾವರಣದಲ್ಲಿ ಅದರ ಮನೋಭಾವನೆಗಳ ರೂಪುರೇಖೆಗಳು, ಅದರ ಆಸಕ್ತಿ ಮತ್ತು ಇಚ್ಛೆಗಳು—ಇವೆಲ್ಲವನ್ನೂ ಮನಗಾಣಬೇಕು. ಆಗಮಾತ್ರ ಮಗುವಿನ ಪೂರ್ಣ ಅಭಿವೃದ್ಧಿ ಸಾಧನೆಯಾಗುವುದು.

ಶಾಲಾ ಜೀವನದಲ್ಲಿ ಅಭಿಮಾನದಿಂದ ಆವೃತವಾದ ಮಗುವು, ಪ್ರೌಢನಾಗಿ ಸಮಾಜವನ್ನು ಪ್ರವೇಶಿಸುವನು. ಉತ್ತಮ ಧ್ಯೇಯ ಮತ್ತು ಶಕ್ತಿಗಳುಳ್ಳ ವ್ಯಕ್ತಿಯನ್ನು ಸಮಾಜ ಮತ್ತು ಸರ್ಕಾರ ಅಥವಾ ರಾಷ್ಟ್ರವು ಪುರಸ್ಕರಿಸಬೇಕು. ವ್ಯಕ್ತಿಯ ಕಾರ್ಯಕ್ಷೇತ್ರವು ಸಮಾಜದ ಅಭಿವೃದ್ಧಿ ಮಾರ್ಗದಲ್ಲಿ ವಿಸ್ತಾರವಾಗಬೇಕು. ವರ್ಗರಹಿತ ಸಮಾಜವು, ವಿಶಾಲದೃಷ್ಟಿಯಿಂದ ವ್ಯಕ್ತಿಯನ್ನೂ ನೋಡಬೇಕು. ಸಮಾಜದ ಯಾವ ಕಾರ್ಯಕ್ಕೆ ಈ ವ್ಯಕ್ತಿಯು ಯೋಗ್ಯ ಎಂಬುದನ್ನು ಕಂಡುಕೊಂಡು, ಅವನನ್ನು ಉಪಯೋಗಿಸಿಕೊಳ್ಳಬೇಕು. ಪ್ರೌಢ ಸಮಾಜದಲ್ಲಿ ವ್ಯಕ್ತಿಯ ಆದರ್ಶ ಮತ್ತು ಕಾರ್ಯಕೌಶಲ್ಯಕ್ಕೆ ಸದವಕಾಶಗಳಿರಬೇಕು. ಆಗಮಾತ್ರ ವ್ಯಕ್ತಿಯ ಶಕ್ತಿಗಳು ನ್ಯಾಯಮಾರ್ಗವನ್ನು ಹಿಡಿದು, ಸಮಾಜದ ಶಕ್ತಿಯು ಹೆಚ್ಚುವುದು. ಪ್ರೌಢ ಸಮಾಜವು ಉತ್ತಮ ಆದರ್ಶವನ್ನು ಪ್ರದರ್ಶಿಸಬೇಕು. ಸಮಾನತೆಯು ಅದರ ಗುರಿಯಾಗಿರಬೇಕು. ಸಮಾಜದ ಕಾರ್ಯರಂಗದಲ್ಲಿ ರಾಷ್ಟ್ರೀಯ ಭಾವನೆಗಳು ಪ್ರದರ್ಶಿತವಾಗಬೇಕು. ಅದರ ಕಾರ್ಯಗಳು ವ್ಯಕ್ತಿಯ ರಾಷ್ಟ್ರೀಯ ಭಾವನೆಗಳನ್ನು ಪ್ರಚೋದಿಸಿ, ಅವನ್ನೂ ನಿರ್ದಿಷ್ಟರೂಪಕ್ಕೆ ತರಬೇಕು. ವ್ಯಕ್ತಿಯ ಹಕ್ಕು ಬಾಧ್ಯತೆಗಳ ಮನ್ನಣೆ, ರಾಷ್ಟ್ರೀಯ ದಿನಗಳ ಆಚರಣೆ, ರಾಷ್ಟ್ರೀಯ ಆದರ್ಶಗಳಿರುವ ಸಾಹಿತ್ಯದ ಸೃಷ್ಟಿ, ಸಾಮುದಾಯಿಕ ಯೋಜನೆಗಳ ನಿರ್ಮಾಣ ಮತ್ತು ಅವುಗಳ ಕಾರ್ಯಾಚರಣೆ—ಇವೆಲ್ಲಾ ಸಮಾಜದ ಮುಖ್ಯ ಕೆಲಸಗಳಾಗಬೇಕು. ಸಮಾಜಕ್ಕೆ ರಕ್ಷಣೆ ನೀಡುವುದು ಸರ್ಕಾರದ ಪ್ರಥಮ ಕರ್ತವ್ಯ. ಸಾಮಾಜಿಕ ಪರಂಪರೆಯು ವ್ಯಕ್ತಿಯ ದೈಹಿಕ ಪರಂಪರೆಯನ್ನು ಉಚಿತ ರೀತಿಯಲ್ಲಿ ಸಂಸ್ಕರಿಸುವಷ್ಟು ಶಕ್ತಿದಾಯಕವಾಗಿರಬೇಕು.

ಕುಟುಂಬ-ಶಾಲೆ-ಸಮಾಜ ಮತ್ತು ಸರ್ಕಾರ ಇವುಗಳ ಆದರ್ಶ ಮತ್ತು ಕಾರ್ಯಕ್ಷೇತ್ರಗಳಲ್ಲಿ ಹೊಂದಾಣಿಕೆ ಅತ್ಯಗತ್ಯ. ಎಲ್ಲವೂ ತಮ್ಮ ರಾಷ್ಟ್ರೀಯತೆಯನ್ನು ಪ್ರದರ್ಶಿಸಬೇಕು. ಭಿನ್ನ ಭಿನ್ನ ಪ್ರದೇಶಗಳಲ್ಲಿ ಹುಟ್ಟಿ, ಭಿನ್ನಭಿನ್ನ ಭೂಭಾಗಗಳಲ್ಲಿ ಹರಿಯುವ ನದಿಗಳು ಕೊನೆಗೆ ಸೇರುವುದು ಅನಂತವಾದ ಸಾಗರವನ್ನೇ ! ಹಾಗೆಯೇ ಕುಟುಂಬ, ಶಾಲೆ, ಸಮಾಜ ಮತ್ತು ಸರ್ಕಾರಗಳು ಭಿನ್ನಭಿನ್ನ ಶಿಕ್ಷಣ ಸಂಸ್ಥೆಗಳಾಗಿದ್ದಾಗ್ಯೂ ಅವುಗಳ ಆದರ್ಶ ಮತ್ತು ಕಾರ್ಯಕ್ಷೇತ್ರವು ವ್ಯಕ್ತಿಗೆ ನಿರ್ದಿಷ್ಟವಾದ ಮಾರ್ಗದರ್ಶನ ನೀಡುವುದೇ ಆಗಿದೆ; ಮಾರ್ಗಗಳು ಬೇರೆಬೇರೆಯಾಗಿದ್ದರೂ ಅವು ಪರಸ್ಪರ ಸಂಬಂಧ ಹೊಂದಿವೆ. ಅವುಗಳ ಕಾರ್ಯಕ್ಷೇತ್ರದಲ್ಲಿ ರಾಷ್ಟ್ರೀಯತೆಯು ಮನೆಮಾಡಿಕೊಂಡಂತೆಲ್ಲಾ, ಅವುಗಳ ಪ್ರಭಾವಕ್ಕೊಳಗಾಗುವ ವ್ಯಕ್ತಿಯಲ್ಲೂ ರಾಷ್ಟ್ರೀಯತೆಯು ಅಂಕುರಿಸಿ, ಸದೃಢವಾಗುವುದು. ಪ್ರತಿ ಭಾರತೀಯನ ಜೀವನದ ಆದರ್ಶವೂ ರಾಷ್ಟ್ರೀಯತೆಯನ್ನು ಪಡೆಯುವುದೇ ಆಗಿರಲಿ; ಅದಕ್ಕಾಗಿ ಈ ಅಂಗಸಂಸ್ಥೆಗಳು ಸಂಯಮದಿಂದ ದುಡಿಯಲಿ,—ಎಂದು ಆಶಿಸೋಣ.

ಜೈ ಬೃಹತ್ ಭಾರತ !

---

ಗಂಡ ಕುಡಿಯಲು ಮೊದಲುಮಾಡಿದರೆ ಅರ್ಧಮನೆ ಸುಡುವುದು; ಹೆಂಡತಿ ಕುಡಿಯಲು ಮೊದಲು ಮಾಡಿದಳೆಂದರೆ ಪೂರ್ತಿ ಮನೆಯೇ ಧಗಧಗಿಸಿ ಉರಿದುಹೋಗುತ್ತದೆ.

* * * * * *

ನಾವು ಹುಟ್ಟುಹಾಕಿದ ದುಡ್ಡು ನಮ್ಮನ್ನೇ ಆದುದರಿಂದ ನಮಗೆ ದಣಿಯಾಗಬೇಕೆ ? ನಮ್ಮ ಗುಲಾಮನಾಗಿರಬೇಕಾದ ಈ ಜಡಸಾಧನ ಚೇತನರಾದ ನಮ್ಮನ್ನೇ ಆಳಬೇಕೆ ?

ಭಾರತದ

ಇತಿಹಾಸದಿಂದ

# ಬ್ರಹ್ಮೇಂದ್ರಸ್ವಾಮಿಗಳು

ಶ್ರೀ ಎಂ. ವಿ. ಶ್ರೀನಿವಾಸ್

ಮಹಾರಾಷ್ಟ್ರ ಭಾರತದಲ್ಲಿನ ಅತ್ಯಂತ ಪ್ರಬಲ ರಾಜ್ಯವಾಗಿ, ಮರಾಠರು ಉಚ್ಛ್ರಾಯಸ್ಥಿತಿಯಲ್ಲಿದ್ದಾಗ, ಒಬ್ಬ ಸಾಧುವಿನ ಸ್ಫೂರ್ತಿ ಸಹಾಯ ಬಹುಮುಖ್ಯವಾದ ಕಾರಣವೆಂಬ ವಿಷಯವನ್ನು ಬಹಳ ಜನ ಅರಿತಿರಲಾರರು. ಮಹಾರಾಷ್ಟ್ರದ ಇತಿಹಾಸದಲ್ಲಿ ಬ್ರಹ್ಮೇಂದ್ರಸ್ವಾಮಿಗಳಿಗೆ ಒಂದು ವಿಶಿಷ್ಟಸ್ಥಾನವಿದೆ. ಶಿವಾಜಿಗೆ ಸಮರ್ಥ ರಾಮದಾಸರಿದ್ದಂತೆ, ಬ್ರಹ್ಮೇಂದ್ರಸ್ವಾಮಿಗಳು ರಾಜಾಶಾಹುವಿಗೂ ಅವನ ಪೇಷ್ವೆ ಬಾಜೀರಾಯನಿಗೂ, ಮಾರ್ಗದರ್ಶಕರಾಗಿ, ರಕ್ಷಕರಾಗಿ, ಅವರನ್ನು ಮಹತ್ಕಾರ್ಯಗಳನ್ನು ಕೈಗೊಳ್ಳಲು ಪ್ರೇರೇಪಿಸಿದ್ದಾರೆ. ಭಾರತದಾದ್ಯಂತ ಅಜೇಯನಾಗಿ ಮೆರೆದ ಜಗದೇಕವೀರ ಪೇಷ್ವೆ ಬಾಜೀರಾಯನಿಗೆ ಅನೇಕ ರೀತಿಯಲ್ಲಿ ನೆರವು ನೀಡಿ ಅವನ ಸಾಹಸ, ಸಾಧನೆಗಳಿಗೆ ಬಹುಮಟ್ಟಿಗೆ ಕಾರಣರಾಗಿದ್ದಾರೆ. ಬ್ರಹ್ಮೇಂದ್ರಸ್ವಾಮಿಗಳು ಮಹಾರಾಷ್ಟ್ರದ ರಾಜಕೀಯದಲ್ಲಿ ಹಾಸುಹೊಕ್ಕಾಗಿ ಸೇರಿಹೋಗಿರುವ ಪ್ರಸಂಗ ಭಾರತೀಯ ಇತಿಹಾಸದ (ಸಂಸ್ಕೃತಿಯ) ಒಂದು ವೈಶಿಷ್ಟ್ಯವಾಗಿದೆ. ಮಹಾತಪಸ್ವಿ ದೈವಭಕ್ತನಾದ ಈ ವಿರಾಗಿ, ರಾಜಕಾರಣಿಗಳೊಡನೆ, ಯೋಧರೊಡನೆ, ಸೇರಿ ಶ್ರಮಿಸಿದ ಸಂಗತಿ ಆಶ್ಚರ್ಯಕರವಾಗಿ ತೋರಿದರೂ, ಇಂತಹ ಪ್ರಸಂಗಗಳು ಭಾರತದ ಇತಿಹಾಸದಲ್ಲಿ ಹೇರಳವಾಗಿರುವುದನ್ನು ಕಾಣುತ್ತೇವೆ. ಖಡ್ಗ ಮತ್ತು ಕಾವಿ ಒಂದಾಗಿ ಶ್ರಮಿಸಿದ ನಿದರ್ಶನಗಳು ಭಾರತದ ಇತಿಹಾಸದಲ್ಲಿ ವಿರಳವೇನಲ್ಲ. ಧರ್ಮಸಂರಕ್ಷಣೆಗೆಂದು ಹೊರಬಂದ ಖಡ್ಗಕ್ಕೆ ಕಾವಿಯು ರಕ್ಷಾಕವಚವನ್ನು ನೀಡಿ ಪ್ರೇರೇಪಿಸಿದೆ. ಅಹಿಂಸೆ ಭಾರತೀಯ ಸಂಸ್ಕೃತಿಯ ಜೀವಾಳವಾದರೂ, ಅನಿವಾರ್ಯವಾದಾಗ ಕರ್ಮಯೋಗಿಯಾಗಿ ಭಾರತೀಯ ಕತ್ತಿ ಹಿಡಿದಿದ್ದಾನೆ.

ಜಗತ್ಪ್ರಸಿದ್ಧವಾದ ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೆ ವಿದ್ಯಾರಣ್ಯರ ಕೊಡುಗೆ ಸಾಮಾನ್ಯವೇ ? ಅಂತೆಯೇ ಯದುವಂಶದ ಅರಸರು ಮೈಸೂರು ರಾಜ್ಯವನ್ನು ಆಳಲು ಪ್ರಾರಂಭಿಸಲು ಜಂಗಮವರೇಣ್ಯನೊಬ್ಬ ಮಾಡಿದ ಸೇವೆ ಅಮೂಲ್ಯವಾದುದಾಗಿದೆ.

ಮಹಾರಾಷ್ಟ್ರ ಸಾಮ್ರಾಜ್ಯ ಸ್ಥಾಪನೆಯ ಉದ್ದೇಶವೇ ಸನಾತನ ಧರ್ಮ ಮತ್ತು ಸಂಸ್ಕೃತಿಯ ರಕ್ಷಣೆ. ಹಿಂದೂ ಧರ್ಮದ ರಕ್ಷಣೆಗೆಂದು ಹುಟ್ಟಿಕೊಂಡಿದ್ದ ವಿಜಯನಗರ ಸಾಮ್ರಾಜ್ಯ ಅಳಿದಾಗ ಈ ಪವಿತ್ರ ಕರ್ತವ್ಯವನ್ನು ಮುಂದುವರೆದುಕೊಂಡು ಹೋಗುವ ಘನೋದ್ದೇಶದಿಂದ, ಶಿವಾಜಿಯು ಒಂದು ಹೊಸರಾಜ್ಯವನ್ನು ಸ್ಥಾಪಿಸಿದನು. ದಕ್ಷಿಣ ಭಾರತದಲ್ಲಿ ಮಹಮ್ಮದೀಯರ ಉಪಟಳವನ್ನು ತಡೆದು, ಭಾರತೀಯ ಸಂಸ್ಕೃತಿಯ ವಿನಾಶವನ್ನು ತಪ್ಪಿಸುವುದೇ ಶಿವಾಜಿ ಛತ್ರಪತಿಯ ಧ್ಯೇಯವಾಯಿತು. ಸಮರ್ಥ ರಾಮದಾಸ, ಸಂತ ತುಕಾರಾಮರಂತಹ ತಪೋನಿಧಿಗಳ ಆಶೀರ್ವಾದದಿಂದ ಶಿವಾಜಿ ಬಲವಾದ ರಾಜ್ಯವೊಂದನ್ನು ನಿರ್ಮಿಸಿ ಮಹಮ್ಮದೀಯರ ದುಷ್ಕೃತ್ಯಗಳನ್ನು ಬಹುಮಟ್ಟಿಗೆ ನಿವಾರಿಸಿದ. ಶಿವಾಜಿಯ ಮರಣಾನಂತರ ಸ್ವಲ್ಪಕಾಲ ಮರಾಠರು ತಮ್ಮ ಪ್ರಾಬಲ್ಯವನ್ನು ಕಳೆದುಕೊಂಡಿದ್ದರೂ, ಹದಿನೆಂಟನೆಯ ಶತಮಾನದಲ್ಲಿ ಅವರ ರಾಜ್ಯ ಎಂದಿಗಿಂತಲೂ ಹೆಚ್ಚಿನ ಪ್ರಾಬಲ್ಯವನ್ನು ಪಡೆಯಿತು. ಮಹಾರಾಷ್ಟ್ರ ಮಹತ್ತಿನಲ್ಲೂ ಬೃಹತ್ತಿನಲ್ಲೂ ವಿಸ್ತಾರಗೊಂಡು ಭಾರತದ ಅತ್ಯಂತ ಪ್ರಬಲರಾಷ್ಟ್ರವಾಯಿತು. ಈ ಸಮಯದಲ್ಲಿ ಆಳಿದ ಮೊದಲ ಮೂವರು ಪೇಷ್ವೆಗಳು ಮರಾಠರ ಅಭ್ಯುದಯಕ್ಕೆ ಕಾರಣವೆಂದು ಹೇಳಲಾಗಿದೆ. ಅದರಲ್ಲಿಯೂ ಎರಡನೆಯ ಪೇಷ್ವೆ ಬಾಜೀರಾಯನನ್ನು ಮಹಾರಾಷ್ಟ್ರ ಸಾಮ್ರಾಜ್ಯದ ನಿಜವಾದ ಸ್ಥಾಪಕನೆನ್ನುವುದುಂಟು.

ಈ ಅದ್ವಿತೀಯ ವೀರ ಶಿವಾಜಿಯ ಕನಸನ್ನು ನನಸಾಗಿ

ಸಲು ಪ್ರಯತ್ನಿಸಿದ. ಶಿವಾಜಿಯ ಮುಖ್ಯ ಗುರಿ ಹಿಂದೂಪಾದ ಪದಶಾಹಿತತ್ವವನ್ನು ಆಚರಣೆಗೆ ತರಲು ಬಾಜೀರಾಯ ಪಣತೊಟ್ಟಿದ್ದ.

ಈ ಸಂದರ್ಭದಲ್ಲಿಯೇ ಬ್ರಹ್ಮೇಂದ್ರಸ್ವಾಮಿಗಳು ಮಹಾರಾಷ್ಟ್ರದ ರಾಜಕೀಯರಂಗದಲ್ಲಿ ಪ್ರಮುಖಪಾತ್ರವನ್ನು ವಹಿಸಿದ್ದರು.

ಬ್ರಹ್ಮೇಂದ್ರಸ್ವಾಮಿಗಳು ಮಹಾರಾಷ್ಟ್ರದ ಧಾವಡಸೀ ಎಂಬ ಸ್ಥಳದಲ್ಲಿ ೧೬೪೯ ರಲ್ಲಿ ಜನಿಸಿದರು. ಬಾಲ್ಯದಿಂದಲೂ ದೈವಭಕ್ತರಾಗಿದ್ದು, ಧರ್ಮ, ದರ್ಶನಗಳ ಆಳವಾದ ಪರಿಚಯವನ್ನೂ ಪಡೆದುಕೊಂಡಿದ್ದರು. ಮೊದಲನೆಯ ಪೇಷ್ವೆ ಬಾಲಾಜೀ ವಿಶ್ವನಾಥ್ ಈ ಯೋಗಿಯನ್ನು ನೋಡಿ ಆತನೊಬ್ಬ ಮಹಾತ್ಮ ಎಂಬುದನ್ನು ಮನಗಂಡು, ತನ್ನ ಗುರುವನ್ನಾಗಿ ಮಾಡಿಕೊಂಡನು.

ಸ್ವಾಮಿಗಳು ರಾಜ್ಯದಲ್ಲೆಲ್ಲಾ ಸಂಚರಿಸಿ ಧರ್ಮಬೋಧೆ ಮಾಡುತ್ತಿದ್ದು ಪ್ರಸಿದ್ಧಿ ಪಡೆದಿದ್ದರು. ಒಳ್ಳೆಯ ವಾಗ್ಮಿಗಳು ಹೇಗೋ ಹಾಗೆ ಉತ್ತಮ ಲೇಖಕರೂ ಆಗಿದ್ದರು. ತಮ್ಮ ಉಪದೇಶದಲ್ಲಿ, ಬರವಣಿಗೆಯಲ್ಲಿ ಜನರು ಕರ್ತವ್ಯಪರರಾಗಿ ನಾಡಿನ ಏಳ್ಗೆಗಾಗಿ ಶ್ರಮಿಸಬೇಕೆಂಬುದನ್ನು ಒತ್ತಿ ಹೇಳುತ್ತಿದ್ದರು.

ಅನೇಕ ಮರಾಠಾ ಮುಖಂಡರೂ, ಅಧಿಕಾರಿಗಳೂ ಸ್ವಾಮಿಗಳ ಶಿಷ್ಯರಾದರು. ಸ್ವಾಮಿಗಳ ಕೀರ್ತಿಯು ಹೆಚ್ಚಿದಂತೆ ಅವರ ಪ್ರಭಾವವು ಹೆಚ್ಚಿದಂತೆ, ಅವರ ಭಕ್ತವಂದವೂ ಬೆಳೆಯುತ್ತಾ ಹೋಯಿತು. ತಮ್ಮ ಭಕ್ತರ ಔದಾರ್ಯವನ್ನು ಉಪಯೋಗಿಸಿಕೊಂಡು ಸ್ವಾಮಿಗಳು ಚಿಪ್ಲೂನ್ ಎಂಬ ಅರಣ್ಯ ಪ್ರದೇಶದಲ್ಲಿ ಒಂದು ಪರಶುರಾಮ ಮಂದಿರವನ್ನು ನಿರ್ಮಿಸಿದರು. ಈ ದೇವಾಲಯ ಬಹುಬೇಗ ಮರಾಠರ ಪವಿತ್ರ ಯಾತ್ರಾ ಸ್ಥಳವಾಯಿತು

ಮಹಾರಾಷ್ಟ್ರದ ಸಾಧುಸಂತರ, ಯೋಗಿಗಳ ಸಾಧು ಸಜ್ಜನರ ಪವಿತ್ರ ಕೇಂದ್ರವಾಯಿತು. ಸ್ವಾಮಿಗಳಲ್ಲಿ ಅಲೌಕಿಕವಾದ ಶಕ್ತಿ ಇದೆ ಎಂದು ಅವರ ಶಿಷ್ಯರು ನಂಬಿದ್ದರು ಅನೇಕ ರೋಗಿಗಳು, ಅವರ ದರ್ಶನ ಪಡೆದು, ತಮ್ಮ ದೀರ್ಘಕಾಲದ ರೋಗಗಳನ್ನು ವಾಸಿಮಾಡಿಕೊಂಡರು. ಸ್ವಾಮಿಗಳ ಹರಕೆಯನ್ನು ಪಡೆದ ಭಕ್ತರ ಇಷ್ಟಾರ್ಥಗಳು ಸಿದ್ಧಿಸಿದವು. ಬ್ರಹ್ಮೇಂದ್ರಸ್ವಾಮಿಗಳ ಪವಾಡಗಳು ಮಹಾರಾಷ್ಟ್ರದ ಮನೆ ಮಾತಾಯಿತು. ಜನ ತಂಡೋಪತಂಡವಾಗಿ ಚಿಪ್ಲೂನಿಗೆ ಯಾತ್ರೆ ಮಾಡಿದರು. ಪರಶುರಾಮನ ಮೂರ್ತಿಯ ದರ್ಶನದಿಂದ ಧನ್ಯರಾಗಿ, ಸ್ವಾಮಿಗಳ ಅಮೃತವಾಣಿಯಿಂದ ಹೃನ್ಮನಗಳನ್ನು ತಣಿಸಿಕೊಳ್ಳುತ್ತಿದ್ದರು. ಕ್ಷೇತ್ರವನ್ನು ಮತ್ತಷ್ಟು ಖ್ಯಾತಿಗೊಳಿಸಲು ಬ್ರಹ್ಮೇಂದ್ರಸ್ವಾಮಿಗಳು ಪ್ರತಿ ಶಿವರಾತ್ರಿ ಸಮಯದಲ್ಲಿ ವಿಜೃಂಭಣೆಯ ಉತ್ಸವಗಳನ್ನು ಏರ್ಪಡಿಸಿದರು. ಒಂದು ವಾರ ಭಜನೆ, ಕಥಾಕಾಲಕ್ಷೇಪ, ಉಪದೇಶ ಮೊದಲಾದ ಕಾರ್ಯಕ್ರಮಗಳಿರುತ್ತಿದ್ದುವು. ಶಿವರಾತ್ರಿಯ ಈ ಜಾತ್ರೆ ಬಹಳ ಜನಪ್ರಿಯವಾಗಿ ಸಹಸ್ರಾರು ಜನ ಭಕ್ತರು ಇಲ್ಲಿಗೆ ಆಗಮಿಸಲಾರಂಭಿಸಿದರು. ಪರಶುರಾಮನನ್ನು ಅರ್ಚಿಸಲು ಪವಾಡಪುರುಷ ಬ್ರಹ್ಮೇಂದ್ರಸ್ವಾಮಿಗಳನ್ನು ಸಂದರ್ಶಿಸಲು, ರಾಜ್ಯದ ಮೂಲೆಮೂಲೆಗಳಿಂದ ಜನರು ಬರುತ್ತಿದ್ದರು. ಬ್ರಹ್ಮೇಂದ್ರಸ್ವಾಮಿಗಳು ಸಹ ರಾಜ್ಯದಲ್ಲೆಲ್ಲಾ ಸಂಚರಿಸಿ ಪ್ರಜೆಗಳಿಗೆ ಭಗವದ್ಭಕ್ತಿಯನ್ನು ಬೋಧಿಸಿ, ಯೋಧರಿಗೆ ತಮ್ಮ ಪವಿತ್ರ ಕರ್ತವ್ಯವನ್ನು ಅನುಸರಿಸಲು ಸ್ಫೂರ್ತಿ ನೀಡುತ್ತಾ ರಾಜ್ಯಕ್ಕೆ ಮಹಾಜ್ಯೋತಿಯಾಗಿ ಬೆಳಗುತ್ತಿದ್ದರು. ಮರಾಠಾ ಮುಖಂಡರಿಂದ ಧನಿಕರಿಂದ ಧನವನ್ನು ಸಂಗ್ರಹಿಸಿ, ಅದನ್ನು ದಾನ, ಧರ್ಮ ಮೊದಲಾದ ಸತ್ಕಾರ್ಯಗಳಿಗೆ ವಿನಿಯೋಗಿಸುತ್ತಿದ್ದರು.

ಈ ಸಂದರ್ಭದಲ್ಲಿ ನಡೆದ ಒಂದು ದುರ್ಘಟನೆ ರಾಷ್ಟ್ರವನ್ನೇ ಕಲಕಿ ಸಾಮಾಜಿಕ ಶಾಂತಿಗೆ ಭಂಗ ತಂದಿತು.

೧೭೨೭ನೇ ವರ್ಷದ ಫೆಬ್ರವರಿಯಲ್ಲಿ ಶಿವರಾತ್ರಿ ಮಹೋತ್ಸವ ಚಿಪ್ಲೂನಿನಲ್ಲಿ ಸಂಭ್ರಮದಿಂದ ನಡೆದಿದ್ದಿತು. ಇದ್ದಕ್ಕಿದ್ದಂತೆ ಪಕ್ಕದ ರಾಜ್ಯ ಜಂಜೀರದಿಂದ ಸೇಡಿನ ಕಿಡಿಯೊಂದು ಹಾರಿಬಂದಿತು. ಅಂಜನವಾಲಿನ ಸಿದ್ದಿಸೌದ್ ಎಂಬ ಮಹಮ್ಮದೀಯ ಅಧಿಕಾರಿ, ನಿಷ್ಕಾರಣವಾಗಿ ಚಿಪ್ಲೂನಿನ ಮೇಲೆ ಧಾಳಿ ನಡೆಸಿದ. ದೇವಾಲಯವನ್ನು ನಾಶಗೊಳಿಸಿ ಪರಶುರಾಮನ ಮೂರ್ತಿಯನ್ನು ಧ್ವಂಸಮಾಡಿದ. ಸಹಸ್ರಾರು ಜನ ನಿರಪರಾಧಿ ಭಕ್ತರ ಮೇಲೆ ದಾಂಧಲೆ ನಡೆಸಿದ. ಲೆಕ್ಕವಿಲ್ಲದಷ್ಟು ಮಂದಿ ಹತರಾದರು. ಮಹಮ್ಮದೀಯ ಸೈನಿಕರ ಅತ್ಯಾಚಾರ ಇತಿಮಿತಿ ಇಲ್ಲದಂತಾಯಿತು ಸಿದ್ದಿಸೌದನ ಈ ಅಮಾನುಷ ವರ್ತನೆ ಮಹಾರಾಷ್ಟ್ರವನ್ನೇ ಕೆರಳಿಸಿತು. ಮರಾಠರಿಗೆಲ್ಲ ಅತ್ಯಂತ ಪೂಜ್ಯರೂ ತಪೋನಿಧಿಗಳೂ ಆಗಿ ಚಕ್ರವರ್ತಿ ಶಾಹುವಿಗೂ ಪ್ರಧಾನಿ ಬಾಜೀರಾಯನಿಗೂ ಗುರುಗಳಾಗಿದ್ದ ಬ್ರಹ್ಮೇಂದ್ರಸ್ವಾಮಿಗಳನ್ನು ಕೆಣಕಿದ ಈ ದೂರ್ತನ ಉದ್ಧಟತನವನ್ನು ಕಂಡು ಎಲ್ಲರೂ ಬೆರಗಾದರು. ಪವಿತ್ರ ಕ್ಷೇತ್ರದ ಮೇಲೆ ನಡೆಸಿದ ದುಷ್ಕೃತ್ಯವನ್ನು ಕಂಡು ಬ್ರಹ್ಮೇಂದ್ರಸ್ವಾಮಿಗಳು ರುದ್ರರಾಗಿದ್ದರು. ಪಾಶವೀಶಕ್ತಿ ಬ್ರಹ್ಮಶಕ್ತಿಯನ್ನು ಮೆಟ್ಟಿ ಎಬ್ಬಿಸಿತ್ತು. ಮರಾಠರು ಇಂತಹ ನೀಚ ಕೃತ್ಯವನ್ನೆಸಗಿ ಸ್ವಾಮಿಗಳಿಗೆ ಅಪಚಾರವೆಸಗಿದ ದ್ರೋಹಿಯನ್ನು ನುಚ್ಚುನೂರು ಮಾಡಲು ಸಿಡಿದೆದ್ದರು. ಪೇಷ್ವೆ ಬಾಜೀರಾಯನೇ ಸ್ವತಃ ಸೈನ್ಯವನ್ನು ತೆಗೆದುಕೊಂಡು ಜಂಜೀ

ರದ ಮೇಲೆ ನುಗ್ಗಿದ. ಜಂಜೀರದಲ್ಲಿದ್ದ ಮುಹಮ್ಮದಿಯರೂ ಬಹಳ ದಿನಗಳಿಂದಲೂ ಮರಾಠರಿಗೆ ತೊಂದರೆ ಕೊಡುತ್ತಿದ್ದರು. ಆದರೆ ಬಾಜೀರಾಯನು ಬಂದ ಸಮಯಕ್ಕೆ ಸರಿಯಾಗಿ ಮಳೆಗಾಲ ಪ್ರಾರಂಭವಾಗಿ ಯುದ್ಧ ಮಾಡಲು ಸಾಧ್ಯವಾಗದೆ ಹೋಯಿತು. ಸಿದ್ದಿಸೌದನಿದ್ದ ಸ್ಥಳ ದುರ್ಗಮವೂ ಅಭೇಧ್ಯವೂ ಆಗಿದ್ದುದರಿಂದ, ನುರಿತ ಯೋಧನಾದ ಬಾಜೀರಾಯನು ಏನೂ ಮಾಡಲಾರದೆ ಹಿಂತಿರುಗಬೇಕಾಯಿತು. ಅನಂತರ ಬಾಜೀರಾಯನ ತಮ್ಮ ಚಿಮ್ಮಾಜಿ ಅಪ್ಪ ಸೈನ್ಯದೊಡನೆ ಜಂಜೀರಕ್ಕೆ ಬಂದಿಳಿದ ಸಿದ್ದಿಸೌದನಿಗೂ, ಚಿಮ್ಮಾಜಿಗೂ, ಘೋರ ಯುದ್ಧವಾಯಿತು. ಮರಾಠರು ಜಯಗಳಿಸಿದರು. ಸಿದ್ದಿಸೌದ ಯುದ್ಧದಲ್ಲಿ ಮಡಿದ. ರಾಜ್ಯದಲ್ಲೇ ಹಾಹಾಕಾರವನ್ನೆಬ್ಬಿಸಿದ ಘಟನೆ ಸಮಾಧಾನಕರ ರೀತಿಯಲ್ಲಿ ಬಗೆಹರಿಯಿತು. ಚಿಮ್ಮಾಜಿಯ ಶೌರ್ಯ ಸಾಹಸಗಳನ್ನು ಮೆಚ್ಚಿ ಎಲ್ಲರೂ ಅಭಿನಂದನೆಯ ಮಳೆಗರೆದರು. "ರಾವಣನಂತಹ ರಾಕ್ಷಸನಾದ ಸಿದ್ದಿಸೌದನನ್ನು ಕೊಂದು ನೀನು ಚಿರಕೀರ್ತಿಯನ್ನು ಪಡೆದಿರುವೆ" ಎಂದು ಸ್ವಾಮಿಗಳು ಚಿಮ್ಮಾಜಿಯನ್ನು ಹರಸಿದರು. ಪಾಪಿಗೆ ತಕ್ಕ ಪ್ರಾಯಶ್ಚಿತ್ತವಾದ ಮೇಲೆ ಸ್ವಾಮಿಗಳ ಭಕ್ತಕೋಟಿ ಮತ್ತೊಂದು ದೇವಾಲಯವನ್ನು ನಿರ್ಮಿಸಿತು.

ಬ್ರಹ್ಮೇಂದ್ರಸ್ವಾಮಿಗಳು, ಪೇಷ್ವೆ ಬಾಜೀರಾಯನೊಡನೆ ನಿಕಟವಾದ ಸಂಪರ್ಕವನ್ನಿಟ್ಟುಕೊಂಡಿದ್ದರು. ಬಾಜೀರಾಯನನ್ನು ಅವನ ಸಹೋದರ ಚಿಮ್ಮಾಜಿಯನ್ನು ರಾಮಲಕ್ಷಣರೆಂದು ಸ್ವಾಮಿಗಳು ಕರೆದಿದ್ದರು. ಬ್ರಹ್ಮೇಂದ್ರಸ್ವಾಮಿಗಳು, ವಿಶ್ವಾಮಿತ್ರ ಮಹರ್ಷಿ ಕೌಸಲ್ಯಾ ಪುತ್ರರಿಂದ ದುಷ್ಟದಮನ ಮಾಡಿಸಿ ಧರ್ಮ ಸಂರಕ್ಷಣೆ ಮಾಡಿಸಿದಂತೆ, ಈ ಸಹೋದರರಿಗೂ ಮಾರ್ಗದರ್ಶಕರಾಗಿ, ಅವರು ಮಹತ್ಸಾಧನೆಗಳನ್ನು ಕೈಗೊಳ್ಳಲು ಕಾರಣರಾದರು. ಮರಾಠಾ ಇತಿಹಾಸದಲ್ಲಿ ಸ್ವಾಮಿಗಳಿಗೆ ಒಂದು ವಿಶಿಷ್ಟ ಸ್ಥಾನವಿದೆ. ತಮ್ಮ ಪ್ರಭಾವ ವರ್ಚಸ್ಸನ್ನು ಎಲ್ಲರ ಮೇಲೂ ಬೀರಿ ಅಂದಿನ ರಾಜಕೀಯದಲ್ಲಿ ಹಾಸುಹೊಕ್ಕಾಗಿ ಸೇರಿಹೋಗಿದ್ದರು. ಛತ್ರಪತಿ ಶಾಹುವಿನಿಂದ ಹಿಡಿದು ಸಾಮಾನ್ಯ ಸರದಾರನವರೆಗೂ ಅವರ ಶಿಷ್ಯರಾಗಿದ್ದರು. ಸರ್ಕಾರದ ಉನ್ನತ ಅಧಿಕಾರಿಗಳೂ, ಮುಖಂಡರೂ ಸ್ವಾಮಿಗಳಿಗಾಗಿ (ಎಂತಹ ತ್ಯಾಗವನ್ನು) ಏನನ್ನು ಬೇಕಾದರೂ ಮಾಡಲು ಸಿದ್ಧವಾಗಿದ್ದರು. ಮಹಾರಾಷ್ಟ್ರದ ಅನಭಿಷಿಕ್ತ ಚಕ್ರವರ್ತಿ ಪೇಷ್ವೆಬಾಜೀರಾಯ ಅವರ ಆಪ್ತ ಶಿಷ್ಯನಾಗಿದ್ದ. ರಾಜ್ಯದ ಸಮಸ್ಯೆಗಳು ಮಾತ್ರವಲ್ಲದೆ ತನ್ನ ವೈಯುಕ್ತಿಕ ಜೀವನದ ವಿಷಯದಲ್ಲಿಯೂ ಅವರ ಸಲಹೆಗಳನ್ನು ಪಡೆಯುತ್ತಿದ್ದ. ಸ್ವಾಮಿಗಳಿಂದ ಬಾಜೀರಾಯ ಅಪಾರ ಹಣವನ್ನು ಸಾಲ ತೆಗೆದುಕೊಳ್ಳುತ್ತಿದ್ದ. ಬಿಡಿಸಲಾಗದಂತಹ ಸಮಸ್ಯೆಗಳು ಬಂದು ಎರಗಿದಾಗ, ಇಕ್ಕಟ್ಟಿನ ಪರಿಸ್ಥಿತಿ ಬಂದಾಗ ಈ ಪ್ರಧಾನಿ "ನನಗೆ ಏನು ಮಾಡಲೂ ತೋಚದಂತಾಗಿದೆ. ಅಧಿಕಾರವನ್ನು ತ್ಯಜಿಸಿ ಸನ್ಯಾಸವನ್ನು ಸ್ವೀಕರಿಸಲೇ ಎನ್ನಿಸಿಬಿಟ್ಟಿದೆ" ಎಂದು ಕಿಂಕರ್ತವ್ಯ ಮೂಢನಾದಾಗ ಸ್ವಾಮಿಗಳು ವಿಮನಸ್ಕನಾದ ಪಾರ್ಥನಿಗೆ ಭಗವಂತನು ಕರ್ತವ್ಯ ಜ್ಞಾನವನ್ನು ಬೋಧಿಸಿ, ಕಾರ್ಯತತ್ಪರನನ್ನಾಗಿ ಮಾಡಿದಂತೆ ಪೇಷ್ವೆಯ ಚಿತ್ತಚಾಪಲ್ಯವನ್ನು ಹೋಗಲಾಡಿಸಿ, ಸ್ಥಿತಪ್ರಜ್ಞತೆಯನ್ನು ಸಾರಿ ಅವನು ಮಹತ್ಕಾರ್ಯಗಳನ್ನು ಕೈಗೊಳ್ಳಲು ಪ್ರೇರೇಪಿಸಿದರು.

ಬ್ರಹ್ಮೇಂದ್ರಸ್ವಾಮಿಗಳು ತಮ್ಮ ಗುರಿಯನ್ನು ಸಾಧಿಸಲು ಅಪಾರವಾದ ಹಣವನ್ನು ಸಂಗ್ರಹಿಸಿದರು. ಎಲ್ಲರಿಂದಲೂ ನಿರ್ದಾಕ್ಷಿಣ್ಯವಾಗಿ ಹಣವನ್ನು ವಸೂಲಿಮಾಡುತ್ತಿದ್ದರು. ಅವನ್ನು ಸಂಗ್ರಹಿಸಿದಂತೆ ಸದ್ವಿನಿಯೋಗಿಸಲು ಹಿಂಜರಿದವರಲ್ಲ. ತಾವು ಸರಳವೂ ನಿರಾಡಂಬರವೂ ಆದ ಜೀವನವನ್ನು ನಡೆಸಿ, ತಾವು ಕಷ್ಟಪಟ್ಟು ಸಂಪಾದಿಸಿದ ಧನವನ್ನು, ಧಾರ್ಮಿಕ ಶೈಕ್ಷಣಿಕ ಕಾರ್ಯಕ್ರಮಗಳಿಗೆ ಉಪಯೋಗಿಸುತ್ತಿದ್ದರು. ಅನೇಕ ದೇವಾಲಯಗಳನ್ನಲ್ಲದೆ, ಪ್ರಯಾಣಿಕರ ಪ್ರಯೋಜನಕ್ಕಾಗಿ ಛತ್ರಗಳನ್ನೂ, ವಸತಿಗೃಹಗಳನ್ನು ನಿರ್ಮಿಸುತ್ತಿದ್ದರು. ದೀನ ದಲಿತರಿಗೆ, ರೋಗಿಗಳಿಗೆ ಉದಾರವಾಗಿ ಧನಸಹಾಯ ಮಾಡುತ್ತಿದ್ದರು. ದಾರ್ಶನಿಕ ಲೇಖಕ, ಮಹಾಯೋಗಿಯಾಗಿ ಪ್ರಖ್ಯಾತಿ ಹೊಂದಿ ವರ್ಷದ ತುಂಬು ಬಾಳನ್ನು ನಡೆಸಿದ ಬ್ರಹ್ಮೇಂದ್ರ ಸ್ವಾಮಿಗಳು ಚರಿತ್ರಕಾರರ ಕುತೂಹಲವನ್ನು ಕೆರಳಿಸಿದ್ದಾರೆ ಅವರು ಸ್ವಾರ್ಥಿಗಳೇ, ಕಪಟಿಗಳೇ, ಆಷಾಢಭೂತಿಗಳೇ ಎಂಬ ಸಂಶಯಗಳು ಉದ್ಭವಿಸಿದಾಗ, ಸ್ವಾಮಿಗಳ ಜೀವನವನ್ನು ಆಳವಾಗಿ ಅಧ್ಯಯನ ಮಾಡಿದ್ದಾರೆ. ಅವರ ಜೀವನವನ್ನು ಎಷ್ಟು ಸೂಕ್ಷ್ಮವಾಗಿ, ಆಳವಾಗಿ ಪರೀಕ್ಷಿಸಿದರೂ ಎಂತಹ ದೌರ್ಬಲ್ಯವಾಗಲೀ, ದುಷ್ಟವೃತ್ತಿಯಾಗಲಿ ಕಾಣಬರುವುದಿಲ್ಲ. ಅವರ ಸಚ್ಚಾರಿತ್ರವನ್ನೂ ಪರಿಶುದ್ಧ ಜೀವನವನ್ನು ಅಲ್ಲಗಳೆಯುವ ಯಾವ ಘಟನೆಯನ್ನೂ ಕಾಣಲಾರೆವು.

ಬ್ರಹ್ಮೇಂದ್ರಸ್ವಾಮಿಗಳ ಪವಾಡಗಳನ್ನು ಅನೇಕ ಇತಿಹಾಸಕಾರರು ನಂಬದೆ ಇರಬಹುದು. ಆದರೆ ಚಿಪ್ಲೂನಿನಲ್ಲಿ ಈಗಲೂ, ಅಂದಿನ ಪ್ರಾಬಲ್ಯ ವೈಭವಗಳ ಸಂಕೇತವಾಗಿ, ಸಾಕ್ಷಿಯಾಗಿ ಚಿಪ್ಲೂನಿನಲ್ಲಿ ತಾನೇ ತಾನಾಗಿ ತಲೆಯೆತ್ತಿ ನಿಂತಿರುವ ಪರಶುರಾಮನ ಮಂದಿರವನ್ನು ನೋಡಿದಾಗ ಬ್ರಹ್ಮೇಂದ್ರ ಸ್ವಾಮಿಗಳ ವಿರಾಟ್ ವ್ಯಕ್ತಿತ್ವದ ಕಿಂಚಿತ್ ಕಲ್ಪನೆಯಾದರೂ ಮಾಡದಿರಲಾರದು.

---

# ಕನ್ನಡಿಗರ ಭಾವೈಕ್ಯತೆ

ಶ್ರೀ ಪಂಡಿತ ಕೆ. ಪಿ. ಶಿವಲಿಂಗಯ್ಯ

ಮಾನವನು ಸ್ವಭಾವತಃ ಸಂಘಜೀವಿ. ಈ ಮಾತು ನಮಗೆ, ನಮ್ಮ ದೇಶಕ್ಕೆ ಮಾತ್ರವೇ ಅಲ್ಲದೆ ಜಗತ್ತಿನ ಯಾವುದೇ ರಾಷ್ಟ್ರಕ್ಕಾದರೂ ಅನ್ವಯಿಸುವುದು. ಹಾಗೆ ಸಾಮೂಹಿಕವಾಗಿ ಒಟ್ಟುಗೂಡಿ ನುಡಿದು, ನಡೆದು ಬಾಳ್ವೆ ಮಾಡುವುದು 'ಐಕ್ಯತೆ'ಯ ಶುಭಸಂಕೇತ. ಆದರೆ ಭೌತಿಕವಾಗಿ ಮಾತ್ರ ಕೂಡಿ ಬಾಳಿದರೆ ಸಾಲದು. ಹೃದಯದಲ್ಲಿ ಒಡಮೂಡಿ ಬರುವ ಭಾವನೆಯಲ್ಲಿಯೂ ನಾವೆಲ್ಲ ಒಂದು-ಎಂಬ ಸತ್‌ಪ್ರವೃತ್ತಿ ಹುಟ್ಟಿ, ಅದು ಆಚರಣೆಯಲ್ಲಿ, ದಿನ ನಿತ್ಯದ ಕಾರ್ಯಚಟುವಟಿಕೆಗಳಲ್ಲಿ, ಸುಖ-ದುಃಖ ಮೊದಲಾದ ಎಲ್ಲ ದ್ವಂದ್ವಗಳಲ್ಲಿ ಸಿಡಿದೆದ್ದು ಕಾಣಬರಬೇಕು. ಅದು ಭಾವೈಕ್ಯತೆ (Emotional integration.)

ಅಂತಹ ಭಾವೈಕ್ಯತೆ ಕನ್ನಡಿಗರಾದ ನಮ್ಮಲ್ಲಿಯೂ ಉದಯಿಸಿ. ಸತ್ಪರಿಣಾಮವನ್ನುಂಟು ಮಾಡಬೇಕೆಂಬ ಬಯಕೆ ಸಹಜವಾದುದೇ ಸರಿ. ಕನ್ನಡಿಗರು-ಎಂದರೆ ಕೇವಲ 'ಕನ್ನಡ' ಮಾತನ್ನಾಡುವವರು ಎಂದು ಭಾವಿಸಿದರೆ ಸಾಲದು. ಹೇಗೆ ಭಾರತದಲ್ಲಿ ವಾಸಿಸುವ ನಾಗರಿಕರೆಲ್ಲ ಭಾರತೀಯರೆನಿಸುವರೊ, ಹಾಗೆ ಕನ್ನಡನಾಡಿನಲ್ಲಿ ಜೀವನಸಾಗಿಸುವ, ಇಲ್ಲಿಯವರೇ ಆಗಿರುವ ಜನತೆ ಯಾವ ಭಾಷೆಯನ್ನೇ ಮಾತನಾಡಲಿ, ಯಾವ ವೃತ್ತಿಯನ್ನೇ ಆರಿಸಿಕೊಂಡಿರಲಿ-ತಾವು ಕನ್ನಡಿಗರು ಎಂಬ ಮನೋಭಾವ ಹೊಂದಿರಬೇಕು. ಇದು ಕೇವಲ ತಾರ್ಕಿಕ ರೀತಿಯ ಅಭಿಪ್ರಾಯವಲ್ಲ. ನಿಜವಾಗಿ ಆಲೋಚಿಸಿದಾಗ ಹೃದಯದಾಳದಿಂದ ಆವಿರ್ಭವಿಸಿ ಹೊರಸೂಸುವ ಮತ.

'ಸರ್ವ ಭಾಷಾ ಮಯೀ ಭಾಷಾ' ಎಂಬಂತೆ ಎಲ್ಲ ಭಾಷೆಗಳೂ ಆ ತಾಯಿ ಭುವನೇಶ್ವರಿ (ನುಡಿಯೊಡತಿ) ಯವೇ ಅಲ್ಲವೆ! ಅಂದಮೇಲೆ ಕೇವಲ ಭಾಷೆಯ ವ್ಯಾಮೋಹ, ವೃತ್ತಿಯ ಭಿನ್ನತೆ, ಜಾತಿಭೇದಗಳ ದೆಸೆಯಿಂದ ಇಡೀ ಕನ್ನಡ ನಾಡನ್ನು-ಈ ಮಾತೃಭೂಮಿಯನ್ನು ತಲೆತಲಾಂತರದಿಂದ ತಾತ ಮುತ್ತಜ್ಜರ ಕಾಲದಿಂದ ಇಲ್ಲಿದ್ದು ಬಾಳ್ವೆ ನಡೆಸಿದ್ದರೂ ಬೇರೆ ಭಾವನೆಗೆಡೆಗೊಡುವುದು ಅವಿವೇಕದ ಲಕ್ಷಣ ಮಾತ್ರವಲ್ಲ; ವಂಚಕತನವೂ ಹೌದು!

ಕನ್ನಡನಾಡು ಇಷ್ಟುದಿನ ಹರಿದು ನಾಲ್ಕಾರು ಬೇರೆಬೇರೆ ಭಾಗಗಳಾಗಿ ಹಂಚಿಹೋಗಿದ್ದುದು ಕನ್ನಡಿಗರಾದ ನಮ್ಮ ಸುದೈವದಿಂದ ಇದೀಗ ಒಂದು ಭಾಗವಾಗಿ ಲಭ್ಯವಾಗಿರುವುದು ನಿಜಕ್ಕೂ ಪುಣ್ಯೋದಯದ ಸಂಗತಿಯೇ ಸೈ. ಪರಿಸ್ಥಿತಿ ಹೀಗಿದ್ದು, ಇನ್ನೂ ಆಚೀಚೆ ಉಳಿದಿರುವ ಕೆಲ ಕನ್ನಡಭಾಗ (ಕಾಸರಗೋಡು, ಹೊಸೂರು, ಸಿದ್ಧರಾಮನ ಸೊನ್ನಲಿಗೆ, ಮಡಕಶಿರಾ ಮುಂತಾದುವು) ಗಳನ್ನು ಜೊತೆಗೂಡಿಸಿಕೊಳ್ಳುವ ಪ್ರಯತ್ನ ನಡೆಯಲೇ ಬೇಕಾಗಿದೆ. ಈ ಪವಿತ್ರ ಕಾರ್ಯದಲ್ಲಿ ಸಫಲರಾಗೋಣ ಎಂಬ ದೃಢಪ್ರತಿಜ್ಞೆ, ಅದಕ್ಕೆ ತಕ್ಕ ಆತ್ಮವಿಶ್ವಾಸ (Self confidence) ಗಳಿಂದ ಮುನ್ನುಗ್ಗೋಣ. ಅಂತಹ ಸತ್ಸಸಂಕಲ್ಪ ನಮ್ಮಲ್ಲುಂಟಾಗಬೇಕು.

ಕನ್ನಡ ಮಾತ್ರವಲ್ಲದೆ, ಇತರ ಯಾವ ಭಾಷೆಯನ್ನೇ ಆದರೂ ಕಲಿಯೋಣ. ಅದರಿಂದ ಅಂದರೆ ಆ ಕಲಿಕೆಯಿಂದ ನಮ್ಮಾಭಾಷೆ ಪರಿಪುಷ್ಟವಾಗಿ ಬೆಳೆಯುವಂತಾಗಬೇಕೇ ವಿನಾ, ಇವರ ಬೆಳವಣಿಗೆಗೆ ಅಡ್ಡಿಯಾಗಬಾರದು. ಈ ದಿಸೆಯಲ್ಲಿ, ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಸಾಹಿತ್ಯದ ಪರಿವರ್ತನೆ ಭಾವೈಕ್ಯ ಪರಸ್ಪರ ಬೆಳೆಸಲೂ, ಒಬ್ಬರನ್ನೊಬ್ಬರು ತಿಳಿದುಕೊಳ್ಳಲೂ ಶ್ರೇಷ್ಠ ಸಾಧನೆಯಾಗಲು ಅವಕಾಶವಿದೆ.

'ಭಾವೈಕ್ಯತೆ'ಯ ಮಾತನ್ನಾಡುವಾಗಲೂ ಒಂದು ದೃಷ್ಟಿಯನ್ನು ಮರೆಯಬಾರದು. ಅದೇನೆಂದರೆ, ನಾವು ಯಾವ ಮಾತನ್ನಾಡಿದರೂ, ಅದು ಸಾಧ್ಯವಾದ ಮಟ್ಟಿಗೂ ಕೃತಿಯಲ್ಲಿ ಇಳಿದು ಬೇರೆಯವರಿಗೆ ಮಾರ್ಗದರ್ಶನವಾಗುವಂತಿರಬೇಕು. 'ನುಡಿಯೊಂದುಪರಿ; ನಡೆಯೊಂದುಪರಿ' ಆಗಬಾರದು. 'ಭಾವ' ಒಡಮೂಡಿದ್ದು ಬಲಿತು ಪಕ್ವವಾಗಬೇಕು. ಆಗಲೇ ಅದರ ಜೊತೆಸೇರಿದ ಐಕ್ಯತೆ-ಒಕ್ಕೂಟ-ಸಫಲವಾಗಲು ಸಾಧ್ಯ.

ಈ ರೀತಿಯಲ್ಲಿ 'ಭಿನ್ನತೆಯಲ್ಲಿ ಏಕತೆ' ಕಾಣಬಹುದಾದ ನಮ್ಮ ಭವ್ಯ ಸಂಸ್ಕೃತಿಯ ದಿವ್ಯ ಛಾತ್ರದಡಿಯಲ್ಲಿ ಕನ್ನಡಿಗರ ಭಾವೈಕ್ಯತೆಯ ಸಾಧನೆ ಮುನ್ನಡೆದು 'ಸಿದ್ಧಿ'ಪಡೆಯಬೇಕು.

ಹಿಂದಣ ಮಂತ್ರದ್ರಷ್ಟಾರರು ಅಪ್ಪಣೆಕೊಡಿಸಿರುವ 'ಓಂ ಸಹನಾವವತು, ಸಹನೌಭುನಕ್ತು, ಸಹವೀರ್ಯಂಕರವಾವಹೈ ತೇಜಸ್ವಿನಾವಧೀತಮಸ್ತು, ಮಾವಿದ್ವಿಷಾವಹೈ ಓಂ ಶಾಂತಿ ಶಾಂತಿ ಶಾಂತಿಃ' ಎಂಬ ದಿವ್ಯವಾಣಿ ಪ್ರಾಯೋಗಿಕವಾಗಿ ಸಾಫಲ್ಯ ಹೊಂದಿ-ನಾವೆಲ್ಲ (ಕನ್ನಡಿಗರೂ) ಕೂಡಿ ಬಾಳೋಣ; ಕೂಡಿ ತಿನ್ನೋಣ; ಕೂಡಿ ನಲಿದು ವೃಥಾದ್ವೇಷಕ್ಕೆಡೆಗೊಡದೆ ನಮ್ಮ ನಮ್ಮಲ್ಲೆ ಕಚ್ಚಾಡದೆ-ಕನ್ನಡ ತಾಯ್ ಚಿರಂತನ ಸೌಖ್ಯದಿಂದ ಬಾಳಿ, ಭಾರತಕ್ಕೇ ಅಲ್ಲದೆ ಇಡೀ ವಿಶ್ವಕ್ಕೇ ಆದರ್ಶ ಎನಿಸುವಂತೆ ನಾವೆಲ್ಲ ದುಡಿಯೋಣ; ಆ ಮಾತನ್ನರಿತು ನಡೆಯೋಣ.

ಒಟ್ಟಾರೆ, 'ಕನ್ನಡಿಗರ ಭಾಷೈಕ್ಯತೆಯ ಸಾಧನೆ' ಕನ್ನಡ ದೇಶದ ಜನ-ಹೃದಯದಲ್ಲಿ ಸದ್ಭಾವನೆಯನ್ನು ತುಂಬಿ ಎಲ್ಲರಲ್ಲೂ ಒಗ್ಗಟ್ಟು ಹೊಂದಿ, ನಾಡು-ನುಡಿಗಳು ಸರ್ವಾಂಗ ಸುಂದರವಾಗುವಂತೆ ಶ್ರಮಿಸುವುದರಲ್ಲಿ ಅಡಗಿದೆ-ಎನ್ನದೆ ಗತ್ಯಂತರವಿಲ್ಲ. ಅಂತಹ ಸುಪಕ್ವಸ್ಥಿತಿ ಕ್ಷಿಪ್ರದಲ್ಲೇ ಉಂಟಾಗುವಂತೆ ದಯಾಮಯನಾದ ಪರಮಾತ್ಮನು ಅನುಗ್ರಹಿಸಲಿ.

'ಸಿರಿಗನ್ನಡಂ ಗೆಲ್ಗೆ-ಬಾಳ್ಗೆ'

## ಅನ್ನ ಚಿಂತೆಯ ಚಮತ್ಕಾರ!

ಊಟಕ್ಕೆ ಬಡಿಸುವುದು ತಡವಾದುದರಿಂದ ಪರಮಹಂಸರು ಸಂಸ್ಕೃತ ಕವಿಯೊಬ್ಬನ ವಿನೋದಕರವಾದ ಶ್ಲೋಕದ ಅರ್ಥವನ್ನು ಹೇಳಲು ಪ್ರಾರಂಭಿಸಿದರು : ದರ್ಶನಾದಿ ಶಾಸ್ತ್ರಗಳಿಗಿಂತ ಕಾವ್ಯ ಮನೋಹರವಾದುದು. ಕಾವ್ಯಪಠನೆಯಾಗುವಾಗ ಜನರಿಗೆನಿಸುತ್ತದೆ, ವೇದಾಂತ-ಸಾಂಖ್ಯ-ನ್ಯಾಯ-ಪಾತಂಜಲ ದರ್ಶಗಳೆಲ್ಲ ಶುಷ್ಕ ಎಂಬುದಾಗಿ. ಕಾವ್ಯಕ್ಕಿಂತ ಸಂಗೀತ ಮನೋಹರವಾದ್ದು. ಸಂಗೀತ ಕಲ್ಲಿನಂಥ ಹೃದಯಗಳನ್ನು ಕರಗಿಸಿಬಿಡುತ್ತದೆ. ಆದರೆ ಸುಂದರಿ ಸಂಗೀತಕ್ಕಿಂತಲೂ ಹೆಚ್ಚು ಆಕರ್ಷಕವಾದ ವಸ್ತು. ಆಕೆ ಏನಾದರೂ ಹತ್ತಿರ ಸುಳಿದಳೆಂದರೆ ಕಾವ್ಯ ಸಂಗೀತಗಳೆರಡೂ ಒಂದು ಮೂಲೆಗೆ ಬಿದ್ದುಕೊಳ್ಳುತ್ತವೆ. ಇಡೀ ಮನಸ್ಸು ಆ ಯುವತಿಯ ಕಡೆ ಹರಿದುಬಿಡುತ್ತದೆ. ಆದರೆ ಯಾವಾಗ ಹಸಿವಾಗಿ ಬಿಡುವುದೋ, ಜಠರಾಗ್ನಿ ಪ್ರಜ್ವಲಿಸುವುದೋ ಆಗ ಕಾವ್ಯ, ಸಂಗೀತ, ಯಾವೂ ರುಚಿಸವು. ಅನ್ನಚಿಂತೆ ಚಮತ್ಕಾರವಾದ್ದು !!

We feel extremely happy to announce that Sri C. P. Sadasivaiah is one of the generous old student of our Mutt Institution of Sree Siddaganga Kshethra. It is a matter of great pride for us to congratulate him for he was quite fortunate enough to have a fine message from Pandit Jawaharlal Nehru wishing him great success in the progress of 'Siva Industries'.

The following is the message: —*Secretary*, Old Boys' Assn., Sree Siddaganga

PRIME MINISTER'S HOUSE
NEW DELHI

July 23, 1962

When I was in Bangalore recently, Shri S.K. Dey, Union Minister for Panchayati Raj and Community Development, told me about Shri C.P. Sadasivaiah of the Shiva Industries in Tumkur, Mysore State. He spoke very highly of the enterprise of Shri Sadasivaiah and suggested that I should meet him and, if possible, visit his industrial establishment. Unfortunately when I went to Tumkur, I could not meet him. Later he came to see me at Bangalore and brought a number of his improved agricultural implements. I was much impressed by these implements and even more so by Shri Sadasivaiah who had started from very small beginnings and by his enterprise and hard work built up this industry which does good service to farmers. I wish him further success.

Jawaharlal Nehru

Sri C. P. Sadasivaiah





ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರಿಗೆ ಲೋಕಸೇವಾನಿರತ ಶ್ರೀ ಜಿ.ಎಂ.ಸಿದ್ಧರಾಮಣ್ಣನವರು ಪುನಃ ೩೦೦೦೦ ರೂಪಾಯಿಗಳನ್ನು ಶ್ರೀ ಸಿದ್ಧಗಂಗಾ ಇಂಜನಿಯರಿಂಗ್ ಕಾಲೇಜ್ ನಿಧಿಗಾಗಿ ಸಮರ್ಪಿಸುತ್ತಿರುವುದು

# ಸುಭಾಷಿತ

ವಿದ್ವಾನ್ ವೈ. ಕೆ. ಚಂದ್ರಶೇಖರಶಾಸ್ತ್ರಿ

ಅಜ್ಞಾನಾಂಧಕಾರದಲ್ಲಿ ತೊಳಲುವ ಸಮಾಜ ಜೀವಿಗಳ ನೇತ್ರ ದೋಷಗಳನ್ನು ಜ್ಞಾನಾಂಜನ ಲೇಪನದಿಂದ ನಿವಾರಿಸಲು ಸಾಧ್ಯ. ಅಂಥ ಅಂಜನಪ್ರಾಯವಾದ ಅಮೂಲ್ಯ ವಾಣಿಗಳನ್ನು ಪ್ರಾಚೀನ ಮಹಾಕವಿಗಳ, ಸಾಧುಸಂತರ, ಆಚಾರ್ಯರ ನುಡಿಗಳಲ್ಲಿ ಕಾಣಬಹುದು. ಅನುಭವೋಪೇತವಾದ ಅವರ ಹಿತವಚನಗಳೇ ಸುಭಾಷಿತಗಳೆನಿಸಿವೆ. ಇಂಥ ಸುಭಾಷಿತಗಳು ಜನಪ್ರಿಯವಾಗಿವೆ ಎನ್ನುವುದರಲ್ಲಿ ಸಂದೇಹವಿಲ್ಲ. ಇದರ ಸವಿಯನ್ನುಂಡ ಸಹೃದಯರು ಈ ರೀತಿಯಾಗಿ ವರ್ಣಿಸಿರುವರು.

"ದ್ರಾಕ್ಷಾ ಮ್ಲಾನಮುಖೀಜಾತಾ ಶರ್ಕರಾಚಾಶ್ಮತಾಂಗತಾ।
ಸುಭಾಷಿತ ರಸಾಸ್ವಾದಾತ್ ಸುಧಾಭೀತಾ ದಿವಂಗತಾ" ॥

ಈ ಮಾತು ಉತ್ಪ್ರೇಕ್ಷಾತಿಶಯೋಕ್ತಿಗಳಿಂದ ಕೂಡಿದ್ದಾಗಿದ್ದರೂ ಕೇವಲ ಇಂದ್ರಿಯಗಳನ್ನು ಕ್ಷಣಕಾಲ ತೃಪ್ತಿಪಡಿಸತಕ್ಕ ಈ ವಸ್ತುಗಳಿಗಿಂತ ಸುಭಾಷಿತವು ಮನಸ್ಸಿನಮೇಲೆ ಉತ್ತಮ ಪರಿಣಾಮವನ್ನು ಬೀರಿ ಮಹದಾನಂದವನ್ನು ಉಂಟುಮಾಡುವುದರಲ್ಲಿ ಸಂದೇಹವಿಲ್ಲವೆಂಬುವೇ ಇದರ ಭಾವ.

ವಿಧಿರೂಪ ನಿಷೇಧರೂಪಗಳಲ್ಲಿರುವ ಸುಭಾಷಿತಗಳು ಜನಸಾಮಾನ್ಯರಿಂದ ಪುರಸ್ಕರಿಸಲ್ಪಟ್ಟರೂ ಅನ್ಯೋಕ್ತಿರೂಪದಲ್ಲಿರುವ ಸುಭಾಷಿತಗಳು ಕೆಲವೊಮ್ಮೆ ನೀತಿಬಾಹಿರರ ಮನಸ್ಸಿನಮೇಲೆ ಕಹಿಯಾಗಿ ಪರಿಣಮಿಸಬಹುದು. ಆದರೆ ವೈಯುಕ್ತಿಕವಾಗಿ ಲೋಪದೋಷಗಳನ್ನು ಉಲ್ಲೇಖಿಸಿ ಪರಿಹಾಸ್ಯಮಾಡುವುವೇ ಸುಭಾಷಿತದ ಉದ್ದೇಶವಲ್ಲ. ತಮ್ಮ ತಮ್ಮ ಲೋಪದೋಷಗಳನ್ನು ತಿದ್ದಿಕೊಂಡು ಸಮಾಜದಲ್ಲಿ ಸತ್ಪ್ರಜೆಯಾಗಿ ಬಾಳಲೆಂದು ಉಪದೇಶಿಸುವುದೇ ಅದರ ಉದ್ದೇಶ.

ಸಮಾಜದಲ್ಲಿನ ನೈತಿಕ ಅಧಃಪತನವನ್ನು ಖಂಡ ತುಂಡಾಗಿ ಖಂಡಿಸತಕ್ಕ ಸುಭಾಷಿತ ಗ್ರಂಥಗಳಲ್ಲಿ ಭರ್ತೃಹರಿಯ ನೀತಿಶತಕವೂ ಒಂದಾಗಿದೆ. ಉನ್ನತ ಧ್ಯೇಯಗಳನ್ನೊಳಗೊಂಡ ಈ ಗ್ರಂಥವು ಭವ್ಯ ಸಮಾಜವನ್ನು ರೂಪಿಸುವ ಮಾರ್ಗದರ್ಶಿಯಾಗಿದೆ. 'ಪ್ರೊಫೆಸರ್ ಡೆ' ಎಂಬುವರು ಹೇಳಿರುವಂತೆ :

"The Nitisataka should not be taken as a mere collection of moral maxims or an epitome of good sense and prudence. It shows at once a lurking attachment to the world and an open revolution from its sordidness."

ಎಂದಂತೆ ಸೂಕ್ತಿ ಸದುಕ್ತಿಗಳ ಸಂಗ್ರಹ ಮಾತ್ರವಲ್ಲ, ದೂರದೃಷ್ಟಿ, ಉದಾತ್ತ ಭಾವನೆಯಿಂದ ಕೂಡಿರುವುದಲ್ಲದೆ ಮಾನವನ ಹೃದಯವನ್ನು ಒಲಿಸಿಕೊಳ್ಳಲು ಮತ್ತು ಸಮಾಜದ ಹೊಲಸನ್ನು ತೆಗೆದುಹಾಕಲು ಕೈಗೊಂಡ ನೈತಿಕ ಕ್ರಾಂತಿಯ ಸಾಧನವಾಗಿದೆ. ಅಜ್ಞಾನಿಯ ಸುಪ್ತಚೇತನವನ್ನು ಬಡಿದೆಬ್ಬಿಸುವ ಚಾಟಿಯು ಏಟನಂತಿರುವ ಅಜ್ಞಪದ್ಧತಿಯ ಸಾರಾಂಶವನ್ನು ಪ್ರಕಟಿಸಲಾಗಿದೆ.

## ಅಜ್ಞಪದ್ಧತಿ ON IGNORANCE

ಅನೈತಿಕ ವ್ಯವಹಾರಗಳಿಗೆ ಅನೇಕ ಕಾರಣಗಳಿವೆ, ಅವುಗಳಲ್ಲಿ ಅಜ್ಞಾನತೆಯೂ ಒಂದು. ಅಜ್ಞಾನಿಗಳಾದ ಆ ಮೂರ್ಖರದ್ದೇ ಒಂದು ಮಾರ್ಗ. ಅವರನ್ನು ತೃಪ್ತಿಪಡಿಸಲು ಬ್ರಹ್ಮನಿಂದಲೂ ಸಾಧ್ಯವಿಲ್ಲ. ತಾವರೆಯ ಮೃಣಾಲದಿಂದ ಮತ್ತ ಗಜವನ್ನಾದರೂ ಕಟ್ಟಬಹುದು. ಕೋಮಲವಾದ ಪುಷ್ಪಾಗ್ರದಿಂದ ವಜ್ರವನ್ನಾದರೂ ಕತ್ತರಿಸಬಹುದು, ಮಧುಬಿಂದುವಿನಿಂದ ಲವಣ ಸಮುದ್ರವನ್ನಾದರೂ ಸಿಹಿಯನ್ನಾಗಿ ಮಾಡಬಹುದು. ಇಂಥ ಅಸಾಧ್ಯವಾದುದನ್ನು ಸಾಧಿಸುವುದೂ ಒಂದೆ ಮೂರ್ಖರ ಮನಸ್ಸನ್ನು ಸಂತೋಷಪಡಿಸುವುದೂ ಒಂದೆ. ಕೊಳೆತು ದುರ್ವಾಸನೆಯುಳ್ಳ ಮೂಳೆಯನ್ನ ಗಿಯುವುದರಲ್ಲಿ ಮಗ್ನನಾಗಿರುವ ನಾಯಿಯು ದೇವೇಂದ್ರನೇ ಪಕ್ಕದಲ್ಲಿ ಬಂದು ನಿಂತರೂ ಸಂಕೋಚಪಡುವುದಿಲ್ಲ. ಅಂತೆ ಭ್ರಷ್ಟವ್ಯವಹಾರದಲ್ಲಿ ಆಸಕ್ತರಾದ ಮೂರ್ಖರು ಸಜ್ಜನರ ಮಾತಿನ ಕಡೆ ಗಮನಿಸುವರೇ? ವೃತ್ತಿಯಿಂದ ಆ ತಪವನ್ನು ನಿವಾರಿಸಬಹುದು, ದಂಡಪ್ರಹಾರದಿಂದ ಕ್ರೂರಪ್ರಾಣಿಗಳನ್ನು ಪಳಗಿಸಬಹುದು. ವಿಷಜಂತುಗಳಿಂದ ಕಡಿಯಲ್ಪಟ್ಟರೂ ಶಾಸ್ತ್ರವಿಹಿತವಾದ ಔಷಧಿ

ಗಳಿವೆ. ಆದರೆ ಮೂರ್ಖರನ್ನು ಚೇತನಗೊಳಿಸುವ ಯಾವ ಔಷಧವೂ ಇಲ್ಲ. ಕಾಡು-ಮೇಡುಗಳಲ್ಲಿ ಕ್ರೂರಪ್ರಾಣಿಗಳೊಂದಿಗೆ ನೆಮ್ಮದಿಯಿಂದ ಅಲೆದಾಡುವುದು ಎಷ್ಟೋ ಮೇಲು. ಭವ್ಯ ಭವನದಲ್ಲಾದರೂ ಮೂರ್ಖರ ಸಹವಾಸವು ಖಂಡಿತ ಬೇಡ. ಸಾಹಿತ್ಯ ಸಂಗೀತ ಜ್ಞಾನವಿಲ್ಲದ, ನೀತಿ ನಿಯಮಗಳ ಅರಿವಿಲ್ಲದ, ಗುಣಶೀಲಗಳನ್ನು ಲವಲೇಶ ಮಾತ್ರವಾದರೂ ಆಚರಿಸದ ಈ ಮೂರ್ಖರು ಆಕಾರದಲ್ಲಿ ಮನುಷ್ಯರಾಗಿದ್ದರೂ ವ್ಯವಹಾರದಲ್ಲಿ ಮೃಗಗಳಂತೆ ಜೀವಿಸುತ್ತಾರೆ. ಆದರೆ ಈ ಮೂರ್ಖರೆಂಬ ಪ್ರಾಣಿಗಳು ಹುಲ್ಲು ತಿನ್ನದೇ ಜೀವಿಸುತ್ತಿರುವುದು ಪ್ರಾಣಿಗಳ ಸೌಭಾಗ್ಯವೇ ಸರಿ.

ಮುಂದಿನ ಸಂಚಿಕೆಯಲ್ಲಿ "ವಿದ್ವತ್ಪ್ರದ್ಧತಿ" ("On Learning") ಎಂಬುದರ ಬಗ್ಗೆ ಲೇಖನವನ್ನು ಪ್ರಕಟಿಸಲಾಗುವುದು.

---

## ಬಸವೇಶ್ವರರ ಗಾದೆಯಂತಹ ವಚನಗಳು

ಸಗಣಿಯ ಬೆನಕಂಗೆ ಸಂಪಗೆಯರಳದಲ್ಲಿ ಪೂಜಿಸಿದರೆ ರಂಜನೆಯಲ್ಲದೆ ಅದರ ಗಂಜಳ ಬಿಡದಣ್ಣಾ.

ಹಬ್ಬಕ್ಕೆ ತಂದ ಹರಕೆಯ ಕುರಿ ತೋರಣಕ್ಕೆ ತಂದ ತಳಿರ ಮೇಯಿತ್ತು ಕೊಂದಹರೆಂಬುದನರಿಯದೆ.

ಹುತ್ತವ ಬಡಿದರೆ ಹಾವು ಸಾಯಬಲ್ಲುದೆ ಅಯ್ಯ ?

ಸುಣ್ಣದ ತುಯ್ಯಲ ಬಣ್ಣವೊಂದೆ ಎಂದರೆ ನಂಟತನಕ್ಕೆ ಉಣ್ಣಬಹುದೆ ?

ಮರಕ್ಕೆ ಬಾಯಿ ಬೇರೆಂದು ತಳಕ್ಕೆ ನೀರೆರೆದರೆ ಮೇಲೆ ಪಲ್ಲವಿಸಿತ್ತು ನೋಡಾ.

# ಸರಸ್ವತಿ

ಓ ತಾಯಿ ಸರಸ್ವತೀ
ನಿನ್ನ ವೀಣೆ ತಂತಿಗಳಲಿ
ಜೇಡ ಬಲೆಯ ನೂತಿದೆ
ನಿನ್ನ ಪಾದ ಪೀಠದ ಕೆಳ-
ಗಿಲಿ ಹೆಗ್ಗಣ ಸೇರಿವೆ
ನಿನ್ನ ಕೈಯ ಪುಸ್ತಕವನು
ಗೆದ್ದಲರ್ಧ ತಿಂದಿದೆ
ನಿನ್ನ ಗುಡಿಯ ಗಂಟೆಗಳಲಿ
ಒಡಕು ನಾದ ಹರಡಿದೆ
ಓ ತಾಯಿ ಸರಸ್ವತೀ
ಏನಿದೆಂಥ ದುರ್ಗತಿ!

ಓ ತಾಯಿ ಸರಸ್ವತೀ
ನಿನ್ನ ಬೆನ್ನ ನೆರಳಿನಲ್ಲಿ
ವ್ಯಾಪಾರವೆ ಸಾಗಿದೆ
ನಿನ್ನ ಹೆಸರಿನಲ್ಲಿ ಇಗೋ
ಹಂಸ ಯಜ್ಞ ನಡೆದಿದೆ
ಕರಿಯ ಶಾಲು ಹೊದ್ದ ಪುರೋ-
ಹಿತರ ತಂಡ ಮೆರೆದಿದೆ
ತೈಲವೆರೆವ ನೆವದೊಳಿವರು
ಎಳೆದು ಉರಿವ ಬತ್ತಿಯ
ಚಿವುಟಿ ಹಾಕಿ ಮಾಡುವರಿದೊ
ನಿನಗೇ ನೈವೇದ್ಯವ

ಓ ತಾಯಿ ಸರಸ್ವತೀ
ಏನಿದೆಂಥ ದುರ್ಗತಿ,
ಕಾಳಿಯಾಗು ಏಳು ತಾಯಿ
ಶೂಲವನ್ನು ತಾಳು ತಾಯಿ
ಏಳು ತಾಯಿ ಸರಸ್ವತೀ
ಕಲ್ಲಾದರೆ ನೀನೆ ಹೀಗೆ
ಹೇಳಿಕೊಳುವುದಾರಿಗೆ ?

—ಜಿ. ಎಸ್. ಶಿವರುದ್ರಪ್ಪ



# ಐಕ್ಯದೃಷ್ಟಿ

ಕಣ್ಣು ಮುಚ್ಚು ಎದೆಯ ಬಿಚ್ಚು
ಹರಿಯಲೊಲವ ಹೊಳೆ ಹುಚ್ಚು
ಅದೆ ಐಕ್ಯದ ಅಚ್ಚು;
ಕಣ್ಣು ಕಾಂಬ ಚೆಲುವು ಹಲವು,
ಎದೆಯ ಚೆಲುವದೊಂದೆ-ಒಲವು:
ನೆಲೆ ನಿಲ್ಲುವ ಗೆಲುವು.

ಕಣ್ಗೆ ಲೋಕ ಚೂರು ಚೂರು;
ಬಣ್ಣವೋ, ನೂರು ನೂರು:
ಎದೆಯೊಳೇಕೆ-ಬಿಳುಪು;
ನೋಟಕೆ ಜಗ ನೂರು ವಿಧ,
ನಿತ್ಯ ಜರಾಸಂಧ ವಧ-
ಎದೆಗೊಂದೇ ಹೊಳಪು.

ಕಣ್ಣ ಹುಡುಕು ತಡಕು ಹುಳುಕು,
ಅದರ ಊಟ ಮಾಡ ಥಳಕು-
ಒಳಗಾಣದ ಕುರುಡು;
ಒಳ ಚೇತಸೆ ಎದೆಗೆ ಮಾನ್ಯ,
ಚೇತ ಚೇತ ಕೂಡ ನನ್ಯ-
ಆಗದು ತಾನೆರಡು.

ಅಲೆ ನೀರಲಿ ಕಂಪೆಲರಲಿ
ನಗೆ ತುಟಿಯಲಿ ನೆಲಸಿದ ತೆರ
ಎದೆಯೊಲವಿನ ಮಾಟ;
ಗಾಳಿ ಗಾಳಿ ಬಾನು ಬಾನು
ದೀಪ ದೀಪ ಕೂಡುವ ತೆರ
ಎದೆ ಎದೆಗಳ ಕೂಟ.

ಕಣ್ಣು ಮುಚ್ಚು ಎದೆಯ ಬಿಚ್ಚು
ಒಳಗೊಲವಿನ ದೀಪ ಹಚ್ಚು
ಬೆಳಕೆಲ್ಲೆಡೆ ಹರಿಯಲಿ;
ಕಣ್ಣು ಕಾಂಬ ಕುಲ-ಕೋಟಿ
ಅಳಿದು, ಎದೆಯ ಐಕ್ಯದೃಷ್ಟಿ
ವಿಶ್ವದಲ್ಲಿ ಮೆರೆಯಲಿ.

—ಎಂ. ವಿ. ಸೀತಾರಾಮಯ್ಯ, ಎಂ.ಎ.

# ದ್ವೈತ್ಯದೃಷ್ಟಿ

ಕಾಲ ಮೋಘವ ಕಡೆದು ತೆಗೆವ ಕರ್ಬೆಣ್ಣೆಯಲಿ
ಹಾಲಾಹಲವನರೆದು ಕಲಸಿ ಮಾಡಿದ ಗುಳಿಗೆ,
ಜರ್ಮನಿಯ ನೆಲಹಾಳದಲ್ಲಿ ಹುದುಗಿರುವೆಲ್ಲ
ವಿಷವಾಯು ಸಂಗ್ರಹವ ಗಟ್ಟಿಮಾಡಿದ ಬೆಟ್ಟ;
ರೋಗಾಣುಗಳನೆಲ್ಲ ಕಲೆಹಾಕಿ ನಿರ್ಮಿಸಿದ
ಮೂಗು ಮುಟ್ಟವ ಮಹಾರೌರವದ ಹೊಲೆಮೊಟ್ಟೆ,
ಮಚ್ಚರದ ರಸವ ಬತ್ತಿಸಿ ಮೊಸಳೆಯೆದೆಯೊಳಿಹ
ಕುತ್ಸಿತಗಳೊಡವೆರಸಿ ಸಮೆದ ಕೊಳಚೆಯ ಪಿಂಡ-
ಯಾವುದದು? ಎಲ್ಲಿಹುದು? ನಗರಸಭೆಯಾಡಳಿತ
ವಿತ್ರಾಕ್ಷ ಹಸ್ತದಲಿ ಸೆರೆಸಿಕ್ಕಿದಾಗ ಮೈ-
ವೆತ್ತು ನಿಲ್ಲುವ ಸರ್ವನಿರಪೇಕ್ಷ ದುಃಸ್ವಾರ್ಥ
ಮಾನವ್ಯತೆಯ ಮೆಟ್ಟಿ ಕೆರಳ್ಪುರಿವ ದೃಷ್ಟಿಯಲಿ !

ಮೂರು ದಿನ ಕಳೆದರೂ ನಡುರಸ್ತೆಯಲಿ ಬಿದ್ದ
ಮೂರು ತಿಂಗಳ ಕೂಸನೆತ್ತಿ ಸಲಹಲು ಕೂಗಿ
ದಾರಿಹೋಕರು ನೂರುಸಲ ಹೇಳಿಕೊಂಡರೂ
ಕೇಳಿಯೂ ಕೇಳದಂತಿರುವ ದುರ್ವ್ಯಸನಮಯ
ಪಾಳಿಯಧಿಕಾರಿಗಳ ಪಾಪರತ ಜಾಡ್ಯವದು-
ಘೋರಯೆಂದು ಕಣ್ಣೀರ ಸುರಿಸಿ ದೂರೊಯ್ದರೂ
ಕಾಯದೆಯ ಕವಚದಲಿ ಸಂರಕ್ಷಣೆಯ ಪಡೆದು
ಓಯೆನ್ನದಿರುವ ದಾನವ್ಯತೆಯ ದೃಷ್ಟಿಯದು !
ನೆನೆದರೆದೆ ಬಿರಿವುದವರಿಂದೊಂದು ರಾಷ್ಟ್ರವೇ
ದಾವಾನಲಗ್ರಸ್ತ ವನವಕ್ಕು; ತಿಸುಳನನು
ಕೆಂಡವಸ್ಲಟ್ಟ ಕೆಂಡವಮಾಡಿ ತಿವಿ, ತೂತು.
ಮಾಡವನು ರಾಷ್ಟ್ರ ಗೌರವವುಳ್ಳ ಸತ್ಪ್ರಜೆಯೆ !

—ಬಿ. ಹೆಚ್. ಶ್ರೀಧರ, ಎಂ.

# ಸಂಜೆ

ಸಂಜೆಯ ಹೊಂಗಿರಣದ ಮಳೆಯಲಿ
ಮುಖತೊಳೆದಿವೆ ಎಲೆಯಡಿಕೆಯ ತೋಟ
ಮುಗಿಲತ್ತಿತ್ತಲು ಕಿವಿಗಲ್ಲವ ತಿವಿಯುತ
ಬೆಟ್ಟ ಬೆಟ್ಟಕೂ ಅಗೊ ಅಗೊ ಸುತ್ತಿವೆ
ಸುತ್ತತೊಡಗುತಿವೆ ಜರಿಪೇಟ

ಆಮರದಿಂದೀಮರಕೂ ಬೆಳ್ಳಕ್ಕಿಯ ಹಾರ
ಕೋಟಿ ಹಕ್ಕಿಗಳು ಒಮ್ಮೆ ಹೊರಡಿಸಿವೆ
ಕೋಟ್ಯಂತರ ಮಧುಸ್ವರಗಳ ತೇರ
ಮರಗಿಡ ತೆರೆದಿವೆ ಗಂಧದಂಗಡಿ
ಸ್ವರಸ್ವರಸ್ವರಕೂ ಮೈ ಬಂದಂತೆ
ಗರಿಬಿಚ್ಚಿವೆ ಹಕ್ಕಿ
ಮರಗಿಡವನು ಮಾಡುತ ಸಂಗೀತದ ಮನೆ
ಹುಚ್ಚಾಗಿವೆ ಸೊಕ್ಕಿ

ಹಾಗೂ ಹಾರಿವೆ ಹೀಗೂ ಹಾರಿವೆ
ಏನೇನೋ ಅವು ಬರೆಯುತಿವೆ:
ಮುಗಿಲು ಮುಗಿಲು ಚಿಲು-ಅಜಂತ
ಪಕ್ಕದಲ್ಲೆ ಅಗೊ ಎಲ್ಲೋರ.

ಸಂಜೆಯ ಹೊಂಗಿರಣದ ಮಳೆಯಲಿ
ಮುಖತೊಳೆದಿವೆ ಎಲೆಯಡಿಕೆಯ ತೋಟ
ಸಂಜೆಗೆ ಸಂಜೆಯೆ ಸಿಂಗರಗೊಂಡಿವೆ,
ಒಯ್ಯಾರದ ನೋಟ.

—ಜಿ. ಎಸ್. ಸಿದ್ಧಲಿಂಗಯ್ಯ



# ದುಡಿಮೆ ನಮ್ಮದು ಕೀರ್ತಿ ಪರರದು

ದುಡಿಮೆ ನಮ್ಮದು ಕೀರ್ತಿ ಪರರದು
ಇಂತಿಹುದು ಜಗದ ಪರಿಯು
ಇಂದಿನ ಯುಗದಿ।
ಶ್ರಮವು ಅತಿಶಯ ಇದು ನಿಸ್ಸಂಶಯ
ಜಗದ ರೀತಿ ನೀತಿಯೇ
ಇಂಥ ವಿಸ್ಮಯ॥

ಶಿರವು ಕಾದರು ದೇಹ ದಣಿದರು
ಬಿಡವೆ ದುಡಿವಹೋರಾತ್ರಿ
ಗಳಿಸಿ ಕೊಡುವೆವು।
ಯಾರೊ ಬರುವರು ಫಲವನುಣುವರು
ತಮ್ಮದೆಂದು ತೋರ್ಕೆಯಲಿ
ಕೀರ್ತಿ ಪಡೆವರು॥

ಜೇನಿನಂತೆಯೆ ನಮ್ಮ ಸಾಹಸ
ಜೇನುಗೂಡ ಕಟ್ಟುವಾ
ಕರ್ಮವೆಮ್ಮದು।
ಎಂದು ಹೇಗೋ ಯಾರು ಯಾರೋ
ಒಡೆಯರೆಂದು ಧಾವಿಸೀ
ಸವಿವರು ಮಧುರ॥

ಬೆಳೆದು ಬರುತಿದೆ ಇಂಥ ಧರ್ಮವೆ
ಅರಸಲೆಲ್ಲಿ ಯೋಗ್ಯತೆಯ
ಮನ್ನಿಸುವವರ।
ನ್ಯಾಯದಾಟವು ನಾಟಕದಂತೆ
ಜಗದ ತುಂಬ ತುಂಬಿಹುದು
ಕುಹಕದ ಸಂತೆ॥

—ಸಿ. ಜಿ. ಪರಮಶಿವಯ್ಯ



## ಉಪನಿಷತ್ ಎಂಬ ತಾಯಿಗೆ

ನಿನ್ನೆದೆಯ ಪೀಯೂಷ ಪಾನದಿಂ ಕೊಬ್ಬಿರುವ
ಕೂಸು ನಾನು ;
ದುಃಖಬಕನೈತರಲಿ ಸುಖದ ಭೀಮನೆ ಬರಲಿ
ಹೊರಳಾಡಿ ಸೋಲಿಸುವೆ ನಾನು !

ಒಂದೆ ಏಟಿನೊಳವರ ಮಲಗಿಸಿಯೆ ಬಿಡಬಲ್ಲೆ,
ನೋಟ ಕಾನೊರಟಾಗಲೊಲ್ಲೆ ;
ಕುಸ್ತಿಯೊಳು ಪ್ರೇಮವುದಿಸುವುದವರ ಮೇಲೆನಗೆ !
ಅವರ ಅಭಿಮಾನವನು ಕಳೆಯಲೊಲ್ಲೆ !

ನನ್ನಂಗಸಾಧನೆಯ ಹಳೆಯ ನೇಹಿಗರವರು !
ಬಿರುಸಾಗಿ ಹೊಡೆಯಲೊಲ್ಲೆ ;
ಆದರೂ ನಿನ್ನೆದೆಯ ಪೀಯೂಷ ಬಲದಿಂದೆ
ಹೊರಳಾಡಿ ಸೋಲಿಸಲು ಬಲ್ಲೆ !

—ಕುಮುದ
(ಜಿ.ಗುಂಡುರಾವ್, ಎಂ.ಎ.)

## ಕವಿಗೆ

ಎಲೆ ಕವಿಯೆ, ಜನದ ಮೆಚ್ಚಿಗೆ ನೀನು ಹಲುಬಬೇಡ
ಅವರ ಕರತಾಡನದ ಗದ್ದಲವೆ ಕೇಳಿಸದು ಸರ್ವಕಾಲ :
ಮೂರ್ಖನಾವನ ತೀರ್ಪೊ ನಾಳೆಯೋ ಬರಬಹುದು
ಮಂದಿಯೆನಿಬರ ನಗೆಯೊ ಕಿವಿ ಕೊರೆಯಬಹುದು
ಎದೆ ಸೆಟೆದು ನಿಲ್ಲು ಚಲಿಸದ ಧೀರಸ್ತಂಭವಾಗಿ.

ಮುಂದೆ ನಡೆ, ನಿನಗೆ ನೀನೆ ದೊರೆ
ದೊರೆಯಾಗ ಬಾರದು ಪರಾವಲಂಬಿ :
ಮುಕ್ತಾಂತ ರಂಗದ ಸಲಹೆಯನ್ನಷ್ಟೆ ಕೇಳು
ನಿನ್ನ ಕಣಸಿನ ಮೊಗ್ಗು ಅರಳುವಂತೆಸಗು–
ನೀ ಪಡೆದ ಗೆಲುವುಗಳ ಸ್ಮರಿಸಲಿಲ್ಲೆನ್ನದಿರು.

ಮೆಚ್ಚು ನಿನ್ನೊಳೆ ಇಹುದು, ನೀನೆ ನಿನ್ನೊರೆಗಲ್ಲು
ನಿನ್ನ ತೀರ್ಪೇ ಕೊನೆಯ ಗಟ್ಟಿ ತೀರ್ಪು :
ನೀನು ತೃಪ್ತನೆ? ಸಾಕು, ಬಿಡು ಮಂದಿ ಕೂಗಲೇಳು
ನಿನ್ನ ಪೀಠದ ಧವಳ ದೀಪಾಂಕುರದ ಮೇಲೆ ಉಗುಳಲೇಳು
ನಿನ್ನ ಮಸಣದ ಮೇಲೆ ಹೊಗೆಯಾಡುತಿರುವ
ಪರಿಮಳವನ್ನೆ ತುಳಿಯಲೇಳು.

ಮೂಲ : **ಪುಷ್ಕಿನ್**
ಅನುವಾದ : **ಹೆಚ್.ಜಿ.ಸಣ್ಣಗುಡ್ಡಯ್ಯ**

## ಕುಂಕುಮ-ಚಿನ್ನದೊಡವೆ

ಅಮ್ಮೊ, ನಿನ್ನ ನೊಸಲಲ್ಲಿ ಕುಂಕುಮವು
ತನಿಗೆಂಡದಂದದಲಿ ತೊಳಗುತಿದೆ !
ನನ್ನ ನೆನಪೇ ಕಾದು ಕೆಂಪಾದ ತೆರದಿ.
ಮನ್ಮಥನ ಮಹದಗ್ನಿ ನೂರುನಾಲಿಗೆ ಚಾಚಿ
ಧಗಧಗಿಸಿ ಉರಿದಂತೆ ಹೊಳೆಯುತಿದೆ–
ನಿನ್ನೊಡಲ ಮೇಲೆ ಚಿನ್ನದೊಡವೆ.... !

**—ವಿ. ಮುನಿಸ್ವಾಮಿ, ಮೈಸೂರು**

# ವಿಸ್ಮಯ

ಕತ್ತಲು ಪರೆಬಿಚ್ಚಿ ಬೆಳಕಿನ ವೈಯ
ತೋರುವ ವಿಸ್ಮಯವ ನೋಡಲೆಂದು
ಕುಳಿತಿದ್ದೆ ಬೆಳತನಕ,
ದೀಪವಿಲ್ಲದ ನನ್ನ ಕೋಣೆಯಲ್ಲಿ
ಇರುಳ ಚಳಿ ಸುರಿದ ಮೌನದ ಧ್ಯಾನ
ಕದಡೀತೆಂದು.

ಉಸಿರ ಬಿಗಿ ಹಿಡಿದು,
ತುಡಿವ ಎದೆ ತಡೆದು
ಕುಳಿತಿದ್ದೆ ಗಾಳ ಹಾಕಿ
ಕತ್ತಲು ಕಡೆದು ತೇಲಿದ್ದ ಹೊಗೆಮುಂಜು
ಯಾವಾಗ ಕವಿದಿತ್ತೊ,
ಬೆಳಗು ಯಾವಾಗ ಹರಿದಿತ್ತೊ—
ಹರಿದಿತ್ತೋ ಇಲ್ಲವೋ—
ತಿಳಿಯಲೇ ಇಲ್ಲ.

ಬಿಡುಗಣ್ಣ ಬಿಟ್ಟಂತೆ ಹಾಗೆಯೇ ಕುಳಿತಾಗ
ಯಾವದೋ ಒಂದು ಕ್ಷಣ
ಪಿಚ್ಚೆಗೆಂಪಿನ ಚಪಲ ಚಮುಕಿನ ರೇಕು
ಛಕ್ಕನೇ ಮಿಂಚಿತ್ತು.

ಹಾರಿ ಗಬಕ್ಕನೇ ಸೆಳೆಯಲೇ ಎಂದು
ಅಡಬರಿಸಿ ಕೈಚಾಚಿ
ಮಂಜೆಲ್ಲವೂ ಕರಗಿ ಬಿಸಿಲೇರಿ
ಹುಲ್ಲಿನೆಲೆಗಳ ಮೇಲೆ ಹನಿಯ ಗುರುತನು
ಮಾತ್ರ ಉಳಿಸಿದ್ದಿತು.

—ಗಿರಡ್ಡಿ ಗೋವಿಂದರಾಜ

# ಬಲ್ಲವರ ಬಿಲ್ಲು

'ಅವಶ್ಯಂ ಅನುಭೋಕ್ತವ್ಯಂ'
ಎಂದ ಜನಮನದಲ್ಲಿ ಇದ್ದುದಾದರು ಏನು ?
'ಅಂತೆಂದು ಎನಿಸದಿರಯ್ಯ'
ಎಂದ ಅಣ್ಣ-ಬಸವಣ್ಣನದ ತಿಳಿದುದಾದರು ಎಂತು ?

ಅನುಭವಿಸು ಮೋಹ್ ಬಿಡು;
ಎಂತಾದರೂ ವಿಶ್ವಕಲ್ಯಾಣಕೋಸುಗವಿರಲಿ—
ನಿನ್ನ ಸಕಲ ಕಾರ್ಯಗಳೆಲ್ಲ;
ಮುಡುಪಿರಲಿ ನಿನ್ನ ಕಣ್ಣು ವೈಮನಗಳೆಲ್ಲ
'ಶಾಂತಿ'ಯನು—ವಿಶ್ವ ಶಾಂತಿಯನು
ಅನುಗೈವ ದಿಸೆಯಲ್ಲಿ.

ತನ್ನೊಳಗೆ ಲೋಕವನು
ಲೋಕದೊಳೆ ತನ್ನನ್ನು
ಪರಿಭಾವಿಸುವ ತೆರನ ಅರಿವು ಮೂಡಿ;
ಜೀವನದ ಗ್ರಂಥವನು
ದಿನ ದಿನದೊಳಭ್ಯಸಿಸಿ
ಬಾಳ ಬಟ್ಟೆಯ ನೀನು ತೊಳಗಿ ಬೆಳಗು.

ಗುರಿಯೇನು ಮಿಲ್ಲದಲೆ
ಕಳವಳದಿ ಅಲೆಯುತ್ತ
ಕಾಲವನದೆಂದಿಗೂ ಕಳೆಯಬೇಡ;
ಟಿಕೀಟು ಕೊಳ್ಳದೆ ಹೊರಟ ಪಯಣಿಗನಂತೆ,
ವಿಷಯವನು ಬಿಟ್ಟು ಬೇರೆಲ್ಲೊ ಹರಿಹಾಯ್ವ—
ಭಾಷಣಿಗನಂತೆ.

ಗಡಿಬಿಡಿಯನೆಂದಿಗೂ ಎಸಗಬೇಡ
ಕುರುಡರಿಗೆ ಕಣ್ಣೀವ ವೈದ್ಯರಾದರು ಇಹರು;
—ಸಮಾಜದ ಕುರುಡಿಂಗೆ ಮದ್ದುಕೊಡುವವರಾರು ?
ಅದರಿಂದೆ ಜಾತಿ ಮೊದಲಾದೆಲ್ಲ ಭೇದವನು ಹರಿದೊಗೆದು,
ಕ್ರತುಶಕ್ತಿ ಚೇತರಿಸೆ—ಸಿಡಿದೆದ್ದು ನಿಲ್ಲು;
ಆಗುವುದು ತಾನದುವೆ ಬಲ್ಲವರ ಬಿಲ್ಲು.

—ಪುಲಿಕೇಶಿ

# ನಗೆಯ ನಾನಾ ಮುಖಗಳು

ಶ್ರೀ ಕೆ. ವೆಂಕಟರಾಮಯ್ಯ

ನಕ್ಕು, ನಗಿಸುವುದು ಮನುಷ್ಯ ಪ್ರಾಣಿಯ ವಿಶೇಷ ಲಕ್ಷಣ. ನಗು ಅನೇಕ ಭಾವನೆಗಳನ್ನು ಸೂಚಿಸುವ ಸಾಮರ್ಥ್ಯ ಪಡೆದಿದೆ. ಸಾಮಾನ್ಯವಾಗಿ ನಗು ಸಂತೋಷವನ್ನು ಸೂಚಿಸುತ್ತದೆ. ತಿರಸ್ಕಾರ ಸೂಚಿಸಲು ನಗುವುದು, ವ್ಯಂಗ್ಯವಾಗಿ ನಗುವುದು, ಪರಿಹಾಸ್ಯಮಾಡಿ ನಗುವುದು, ಮೆಚ್ಚಿಗೆಯನ್ನು ಸೂಚಿಸಲು ನಗುವುದು ಸಾಮಾನ್ಯವಾಗಿ ಎಲ್ಲರಿಗೂ ತಿಳಿದ ನಗುವಿನ ಮುಖಗಳು. ನಗುವುದಕ್ಕೆ ಸಮಯ, ಸಂದರ್ಭಗಳು ಬಹಳ ಚೆನ್ನಾಗಿ ತಿಳಿದಿರುವವರು ಅಪರೂಪ. ಹೊತ್ತು ಗೊತ್ತಿಲ್ಲದೆ ನಕ್ಕು ಅನಾಹುತಗಳಿಗೆ ಎಡೆಮಾಡಿಕೊಟ್ಟಿರುವ ದೇವತೆಗಳು, ಮಾನವರು ಅನೇಕರಿದ್ದಾರೆ. ಗಣಪತಿಯನ್ನು ನೋಡಿ ನಕ್ಕು ಚಂದ್ರ ಶಾಪಕ್ಕೆ ಒಳಗಾದ ಕತೆ ನಮ್ಮೆಲ್ಲರಿಗೂ ಗೊತ್ತಿದೆ. ದ್ರೌಪದಿ ತನ್ನ ಭಾವಮೈದುನದಿರನ್ನು ಪರಿಹಾಸ್ಯ ಮಾಡಿ ನಕ್ಕು ಮಹಾಭಾರತ ಯುದ್ಧಕ್ಕೆ ತಳಹದಿ ಹಾಕಿದಳೆಂದು ಹಿರಿಯರು ಹೇಳುವುದನ್ನು ಕೇಳಿದ್ದೇವೆ.

ಕಾಳಿಕಾದೇವಿಯನ್ನು ಕುರಿತು ತೆನಾಲಿ ರಾಮಕೃಷ್ಣ ತಪಸ್ಸು ಮಾಡುತ್ತಿದ್ದಾಗ, ಕಾಳಿಕಾದೇವಿ ಪ್ರತ್ಯಕ್ಷವಾದಾಗ ತೆನಾಲಿ ರಾಮಕೃಷ್ಣನಿಗೆ ಬಹಳ ನಗು ಬಂತಂತೆ. ಕಾಳಿಕಾದೇವಿಗೆ ನೆಗಡಿಯಾದರೆ ಏನು ಗತಿ, ಹೇಗೆ ಮೂಗು ಒರಸಿಕೊಳ್ಳುವಳು ಎಂಬ ಚಿತ್ರ ನೆನಪಿಗೆ ಬಂದು ರಾಮಕೃಷ್ಣ ನಕ್ಕನಂತೆ. ಅವನ ವಿವರಣೆ ಕೇಳಿ ಕಾಳಿಕಾದೇವಿಗೂ ನಗು ಬಂದು, "ನಗಿಸುವುದರಿಂದಲೇ ನೀನು ಕೀರ್ತಿ ಪಡೆ" ಎಂದು ಹರಸಿದಳಂತೆ.

ಮಕ್ಕಳ ನಗು, ಮಹಾಪುರುಷರ ನಗು, ಎಲ್ಲರನ್ನೂ ಸಂತೋಷಪಡಿಸುವ ಸಾಮರ್ಥ್ಯವುಳ್ಳವು. ಶತ್ರುಗಳನ್ನು ಜಯಿಸಬಲ್ಲ ಶಕ್ತಿಯನ್ನು ಹೊಂದಿವೆ ಅವು.

ನಮಗೆ ನಗು ಬರಲು ಕಾರಣವೇನು ಎಂದು ನಿರೂಪಿಸುವುದು ಸುಲಭವಲ್ಲ. ಆದರೆ ಅನೇಕ ಸಂದರ್ಭಗಳಲ್ಲಿ ಅನಿರೀಕ್ಷಿತ ಪರಿಣಾಮ ನಗುವನ್ನುಂಟುಮಾಡುತ್ತದೆ ಎಂದು ಹೇಳಬಹುದು. ಸಣ್ಣ ಮಗುವನ್ನು ತಮಾಷೆಗೋಸ್ಕರ ಸ್ವಲ್ಪ ಮೇಲಕ್ಕೆ ಎಸೆದರೆ ಗಾಬರಿಯಾಗುತ್ತದೆ. ಅದನ್ನು ತಕ್ಷಣ ಹಿಡಿದುಕೊಂಡರೆ ಜೋರಾಗಿ ನಗುತ್ತದೆ. ಕೆಳಕ್ಕೆ ಬೀಳುವ ನಿರೀಕ್ಷೆಯಲ್ಲಿದ್ದ ಗಾಬರಿ, ಸುರಕ್ಷಿತವಾಗಿ ಕೈಯಲ್ಲಿ ಕುಳಿತಾಗ, ಅನಿರೀಕ್ಷಿತ ಪರಿಣಾಮದಿಂದ ನಗುವಾಗಿ ಮಾರ್ಪಡುತ್ತದೆ. ಟಾರ್ ರಸ್ತೆಯಲ್ಲಿ ಠೀವಿಯಿಂದ, ಮಾವ ಹೊಲಿಸಿಕೊಟ್ಟ ಮದುವೆ ಸೂಟ್ ಹಾಕಿಕೊಂಡು ಹೋಗುತ್ತಿರುವ ಯುವಕ ಬಾಳೆಹಣ್ಣಿನ ಸಿಪ್ಪೆ ಮೇಲೆ ಕಾಲಿಟ್ಟು ಜಾರಿದರೆ ನಗು ಬರುತ್ತದೆ. ಆದರೆ ಸಣ್ಣ ಹುಡುಗನೋ, ಮುದುಕನೋ ಹಾಗೆ ಜಾರಿದರೆ ಕರುಣೆ ಉಂಟಾಗುತ್ತೆ.

ಅನಿರೀಕ್ಷಿತ ಉತ್ತರಗಳೂ ನಗುವನ್ನುಂಟುಮಾಡುತ್ತವೆ. ಈ ಬಗೆಯ ಸಂದರ್ಭಗಳು ನಗೆಹನಿಗಳ ಮೂಲ. ಕೆಲವು ಉದಾಹರಣೆಗಳು ಈ ತತ್ವವನ್ನು ಸ್ಪಷ್ಟಪಡಿಸುತ್ತವೆ.

"ಅಪ್ಪಾ, ಸೊಳ್ಳೆ ಪರದೆ ಹೇಗೆ ಮಾಡ್ತಾರಪ್ಪಾ" ಅಂತ ಮಗು ಕೇಳಿದ್ದಕ್ಕೆ "ಸಣ್ಣ ತೂತುಗಳನ್ನೆಲ್ಲಾ ಸೇರಿಸಿ ಹೊಲಿಯುತ್ತಾರೆ. ಅದೇ ಸೊಳ್ಳೆ ಪರದೆಯಾಗುತ್ತೆ" ಅಂತ ಅಪ್ಪ ಕೊಟ್ಟ ಉತ್ತರ ನಗುವನ್ನುಂಟುಮಾಡುತ್ತೆ.

ಒಬ್ಬ ಯುವಕ ಅಧಿಕಾರಿ ತನ್ನ ಕಚೇರಿಗೆ ಬಂದ ಕೂಡಲೇ ಒಂದು ಬೀಡಿ ತುಂಡು ಕಾಣುತ್ತೆ. ಆಳನ್ನು ಕರೆದು "ನಿನ್ನದೇನೋ ಇದು ?" ಎಂದು ಕೇಳಿದರೆ, "ಪರವಾಗಿಲ್ಲ, ಸೇದಿ ಬುದ್ಧೀ" ಅಂತ ಆಳು ಉತ್ತರ ಕೊಟ್ಟರೆ ನಗು ಬರೋದಿಲ್ಲವೇ?

ಆಳುಗಳನ್ನು ಗೋಳು ಹೊಯ್ದುಕೊಳ್ಳುವ ಸ್ವಭಾವವುಳ್ಳ ಯಜಮಾನ ಮನೆಗೆ ಬಂದಾಗ, ಪ್ರತಿದಿನ ಸಂಜೆ ಗಿಡಗಳಿಗೆ ನೀರು ಹಾಕಬೇಕಾದ ಆಳು ಸುಮನೆ ನಿಂತಿರುವುದು ಬಹಳ ಕೋಪವನ್ನುಂಟುಮಾಡುತ್ತೆ ಯಜಮಾನನಿಗೆ. "ಯಾಕೋ ಗಿಡಕ್ಕೆ ನೀರು ಹಾಕ್ದೇ ನಿಂತಿದ್ದೀ ?" ಎಂದು ಕೇಳಿದರು ಯಜಮಾನರು. "ಮಳೆ ಬರ್‍ತಾ ಇದೆಯಲ್ಲಾ ಬುದ್ಧೀ" ಅಂದ ಆಳು.

"ಮಳೆ ಬರ್‍ತಿದ್ರೆ, ಛತ್ರಿ ಹಿಡಿದುಕೊಂಡು ನೀರು ಹಾಕು" ಅಂತ ಗದರಿಸಿದರು ಯಜಮಾನರು. ಈ ಅನಿರೀಕ್ಷಿತ ಆಜ್ಞೆ ನಗುವನ್ನುಂಟುಮಾಡುತ್ತದೆ.

ಹೀಗೆಯೇ, ಮನೆಗಳಲ್ಲಿ, ಮಾರ್ಕೆಟ್ಟುಗಳಲ್ಲಿ, ಶಾಲೆಗಳಲ್ಲಿ, ಅಸೆಂಬ್ಲಿಗಳಲ್ಲಿ, ಕಚೇರಿಗಳಲ್ಲಿ, ಆಟದ ಮೈದಾನಗಳಲ್ಲಿ ನಗೆಹನಿಗಳ ಸಂದರ್ಭಗಳು ಎಲ್ಲರಿಗೂ ಒದಗಿ ಬರುತ್ತವೆ. ಇದಕ್ಕೆ ಕೆಲವು ಸ್ವಾರಸ್ಯ ನಿದರ್ಶನಗಳನ್ನು ಪರೀಕ್ಷಿಸೋಣ. ತೊಟ್ಟಿಲಲ್ಲಿ ಮಗು ಅಳುತ್ತಿತ್ತು. ಚಿಕ್ಕ ಹುಡುಗ ತೂಗಿ ಮಲಗಿಸಲು ಪ್ರಯತ್ನಿಸಿ ಬೇಸರಗೊಂಡ. "ಅಮ್ಮಾ, ಎಷ್ಟು ತೂಗಿದರೂ ಮಲಗೋದೇ ಇಲ್ವಲ್ಲಮ್ಮಾ" ಅಂತ ಚಾಡಿ ಹೇಳಿದ. "ಹಾಗೇ ತೂಗ್ತಾ ಇರು, ನಾನು ಬಂದು ಹಾಡು ಹೇಳಿ ಮಲಗಿಸುತ್ತೇನೆ" ಅಂದಳು ಅಮ್ಮ. "ಹಾಗೂ, ಹೆದರಿಸಿದೆ ಅಮ್ಮಾ, ಆದರೂ ಮಲಕ್ಕೊಳ್ಳೋಲ್ಲಾ" ಅಂದ ಹುಡುಗ.

ಒಬ್ಬ ದೊಡ್ಡ ಸಂಗೀತ ವಿದ್ವಾಂಸರು ಅನೇಕ ಕೀರ್ತನೆಗಳನ್ನು ಹಾಡಿದರು. ಸಭಿಕರು ಪದೇ ಪದೇ ಚಪ್ಪಾಳೆ ತಟ್ಟಿದರು. ಸಭಿಕರನ್ನು ತೃಪ್ತಿಪಡಿಸಲು ವಿದ್ವಾಂಸರು "ಈಗ ಯಾವುದು ಹಾಡಲಿ?" ಎಂದು ಹೆಮ್ಮೆಯಿಂದ ಕೇಳಿದರು. "ಮಂಗಳ ಹಾಡಿ, ಸ್ವಾಮಿ" ಅಂದ್ರು ಮುಂದೆಯೇ ಕೂತಿದ್ದವರು ಒಬ್ಬರು.

ಸಮೀಪ ದೃಷ್ಟಿದೋಷವುಳ್ಳ ಉಪಾಧ್ಯಾಯರು ತರಗತಿಯಲ್ಲಿ ಚರಿತ್ರೆ ಪಾಠ ಮಾಡುತ್ತಿದ್ದರು. ಹಿಂದಿನ ಬೆಂಚಿನ ಬಳಿ ಯಾರೋ ದಾಂಡಿಗ ವಿದ್ಯಾರ್ಥಿ ನಿಂತು ಚೇಷ್ಟೆ ಮಾಡುತ್ತಿದ್ದಂತೆ ತೋರಿತು ಉಪಾಧ್ಯಾಯರಿಗೆ. ಅವನ ಕಡೆ ಕೈ ತೋರಿಸಿ "4 ನೇ ಮೈಸೂರು ಯುದ್ಧ ಯಾವ ಇಸವಿಯಲ್ಲಿ ನಡೆಯಿತು ಹೇಳೋ" ಅಂತ ಪ್ರಶ್ನೆ ಕೇಳಿದರು. "ನನಗೆ ಗೊತ್ತಿಲ್ಲ ಸಾರ್. ನಾನು ಮೀಟರ್ ಬಾಕ್ಸ್ ರಿಪೇರಿ ಮಾಡೋದಕ್ಕೆ ಬಂದಿದ್ದೀನಿ ಸಾರ್" ಅಂದ. ವಿದ್ಯಾರ್ಥಿಗಳೆಲ್ಲಾ ಗೊಳ್ಳಂತ ನಕ್ಕರು ಅಂತ ಹೇಳಬೇಕೇ?

ಒಂದು ಮದುವೆಯ ತಂಡದವರು ರೈಲಿಗಾಗಿ ಒಂದು ಸಣ್ಣ ರೈಲು ನಿಲ್ದಾಣದಲ್ಲಿ ಕಾಯುತ್ತಾ ಕುಳಿತಿದ್ದರು. ಒಬ್ಬ ಹುಡುಗ ಪದೇ ಪದೇ ಸ್ಟೇಷನ್ ಮಾಸ್ಟರ ಬಳಿಗೆ ಹೋಗಿ "ಸಾರ್ ರೈಲು ಯಾವಾಗ ಬರುತ್ತೆ?" ಅಂತ ಪ್ರಶ್ನೆ ಕೇಳುತ್ತಿದ್ದ. "8.25 ಕ್ಕೆ" ಎಂದು ನಾಲ್ಕೈದು ಸಲ ಉತ್ತರ ಕೊಟ್ಟಿದ್ದ ಸ್ಟೇಷನ್ ಮಾಸ್ಟರಿಗೆ ರೇಗಿತು. "ಎಷ್ಟು ಸಲಾನೋ ಹೇಳೋದು 8.25 ಕ್ಕೆ ಅಂತ. ಒಂದು ಚೀಟೀಲಿ ಬರೆದು ಕೊಡ್ಲೇನೋ" ಅಂದ್ರು. "ಬೇಡಾ ಸಾರ್ ನೀವು 8.25 ಕ್ಕೆ ಅಂತ ಹೇಳುವಾಗ ನಿಮ್ಮ ಮೀಸೆ ಕುಣಿಯುವುದನ್ನು ನೋಡಲು ನನಗೆ ತುಂಬಾ ಆಸೆ" ಅಂದ ಹುಡುಗ.

ಈ ಉದಾಹರಣೆಗಳಲ್ಲೆಲ್ಲಾ ಅನಿರೀಕ್ಷಿತ ಉತ್ತರವೇ ನಗೆಹನಿಗೆ ಕಾರಣ ಎಂದು ಸುಲಭವಾಗಿ ಕಾಣಬಹುದು. ಕೆಲವು ವೇಳೆ ಅನಿರೀಕ್ಷಿತ ನಡವಳಿಕೆಗಳೂ ನಗುವನ್ನುಂಟು ಮಾಡುತ್ತವೆ ಮರೆವು ಸ್ವಭಾವವುಳ್ಳವರ ನಡವಳಿಕೆಗಳು ತಮಾಷೆಯಾಗಿರುತ್ತವೆ. ಕನ್ನಡಕವನ್ನು ಹಣೆಯಮೇಲೆ ಏರಿಸಿಕೊಂಡು, ಕನ್ನಡಕಕ್ಕಾಗಿ ಪರದಾಡುತ್ತಿರುವ ತಾತನನ್ನು ನೋಡಿ ಮೊಮ್ಮಕ್ಕಳು ನಗುತ್ತಿರುವ ಸಂದರ್ಭಗಳು ನಾವು ಅನೇಕ ಸಲ ನೋಡಿದ್ದೇವೆ. ಮರೆವು ಪ್ರೊಫೆಸರುಗಳ ಲಕ್ಷಣ ಅಂತ ಅನೇಕರ ನಂಬಿಕೆ. ಅಂತಹ ಒಬ್ಬ ಪ್ರೊಫೆಸರರು ಮಳೆಯಲ್ಲಿ ಮನೆಗೆ ಬಂದರು. ಛತ್ರಿಯನ್ನು ಮಡಿಸಿ ಹಾಸಿಗೆ ಮೇಲಿಟ್ಟು ತಾವು ಹೋಗಿ ಮೂಲೆಯಲ್ಲಿ ನಿಂತರಂತೆ!

ನಗುವುದು ಒಂದು ಕಲೆ, ಒಂದು ವಿದ್ಯೆ. ನಕ್ಕು ನಗಿಸುವ ಸ್ನೇಹಿತ ಎಲ್ಲರಿಗೂ ಪ್ರಿಯನಾಗುತ್ತಾನೆ. ನಗುತ್ತಿರುವ ವ್ಯಕ್ತಿ ತನ್ನ ಸುತ್ತಲೂ ಸಂತೋಷದ ವಾತಾವರಣವನ್ನು ಕಲ್ಪಿಸುತ್ತಾನೆ. ತನ್ನ ತಪ್ಪುಗಳನ್ನು ನೋಡಿ ತಾನೆ ನಗುವ ವ್ಯಕ್ತಿ ಬಹಳ ವಿವೇಕಿ ಎಂದು ಹೇಳುತ್ತಾರೆ. ನಗುನಗುತ್ತಾ ಬಾಳುವುದು ಒಳ್ಳೆಯ ಸುಸಂಸ್ಕೃತನಂತನಿಗೆ ಮಾತ್ರ ಸಾಧ್ಯ. ವಿವೇಕ, ತೃಪ್ತಿಗಳ ಪರಿಣಾಮವಾಗಿ ಬರುವ ನಗುಮುಖ ಒಂದು ಭಾಗ್ಯ. ಅದು ಪರಮಾತ್ಮನ ಕೃಪೆಯಿಂದ ಬರಬೇಕು. ಆ ಕೃಪೆ ನಮ್ಮೆಲ್ಲರಿಗೂ ಉಂಟಾಗಲಿ.

---

"ಹಬ್ಬಕ್ಕೆ ತಂದ ಹರಕೆಯ ಕುರಿ ತೋರಣಕ್ಕೆ ತಂದ ತಳಿರ ಮೇಯಿತು"

"ಅಯ್ಯೋ ಎಂದೆಡೆ ಸ್ವರ್ಗ, ಎಲವೋ ಎಂದೆಡೆ ನರಕ"

# ಷಡಕ್ಷರಿಯ ರಾಜಶೇಖರ ವಿಲಾಸದಲ್ಲಿ ಶೃಂಗಾರ ವರ್ಣನೆಯ ವಿಮರ್ಶೆ

ಶ್ರೀ ಎಂ. ನಂಜುಂಡಯ್ಯ

ಕವಿಃ ಕರೋತಿ ಕಾವ್ಯಾನಿ
ರಸಂ ಜಾನಂತಿ ಪಂಡಿತಾಃ
ಕನ್ಯಾಸುರತ ಚಾತುರ್ಯಂ
ಜಾಮಾತಾ ವೇತ್ತಿ ನೋ ಪಿತಾ

"ಕವಿ ಕಾವ್ಯವನ್ನೇನೋ ನಿರ್ಮಿಸಬಲ್ಲ. ಆದರೆ ಆ ಕಾವ್ಯರಸವನ್ನು ರಸಿಕರಾದ ಪಂಡಿತರು ಅರಿಯಬಲ್ಲರು. ತನ್ನ ಮಗಳ ರತಿಕೇಳಿಯು ಕಲಾಕೌಶಲ್ಯವನ್ನು ಅಳಿಯ ಬಲ್ಲನಲ್ಲದೆ ತಂದೆ ಏನುಬಲ್ಲ?" ಎಂದು ಈ ಶ್ಲೋಕದ ಅರ್ಥ. ಇದನ್ನರಿತೇ ಮಹಾಕವಿ ಷಡಕ್ಷರಿ ತನ್ನ ಕೃತಿ ಕುಮಾರಿಯನ್ನು ಮತಿವಂತರ ಮಡಲಿಗೆ ಹಾಕಿ ಸಂತುಷ್ಟನಾಗಿದ್ದಾನೆ.

ಕೃತಿ ಕೃತಕೃತಿಯುಂ ಕ್ಷಿತಿಯೊಳ್
ಮತಿರಹಿತರ್ ತಿಳಿಯರೆಂದು ಪಳಿಯೆಂ ಮುಳಿಯೆಂ
ರತಿಲಾಲಸ ರಮಣೀ ಸಮು-
ರತಿಯಂ ಕ್ಲೀಬರ್ಕಳೆಂತು ಮೇಣರಿದಪರೇ

ಎಂದು ಷಡಕ್ಷರ ಕವಿ ಹೇಳಿರುವುದರಲ್ಲಿ ಎಂತಹ ಸ್ವಾರಸ್ಯವಡಗಿದೆ! ಕವಿಗಳಿಗೆ ತಮ್ಮ ಕೃತಿಕನ್ಯೆಯನ್ನು ನೀರಸರಿಗೆ ಕೊಡುವುದೆಂದರೆ ಆಗದು. ನೀರಸಿಕನಾದ ನಪುಂಸಕನಿಗೆ ನೀರಜಾಕ್ಷಿಯನ್ನು ಕೊಡುವುದರಿಂದಾಗುವ ಲಾಭವಾದರೂ ಏನು? ಕವಿಯ ಈ ಮನೋಜ್ಞವಾಣಿಯಿಂದಲೇ ರಾಜಶೇಖರವಿಳಾಸ ಅದೆಂತಹ ರಸವತ್ಕಾವ್ಯವೆಂಬುದನ್ನು ವಿವರಿಸಿ ಹೇಳಬೇಕಾದುದು ಅನಗತ್ಯ. ಆದ್ದರಿಂದ :

ಸಕಳ ಕಳಾನಿಧಿ ನಿಕಟದೆ
ಸುಕರ ರಸಪ್ರಕಟ ಕಾವ್ಯವೆಂಬಮೃತಪಯೋ
ಧಿ ಕರಂ ಪೆರ್ಚುಗುಂ

ಎಂದು ಕವಿ ಹೇಳಿರುವ ಮಾತು ಬಹು ಮನೋಜ್ಞವಾದುದು. ಕಲಾನಿಧಿಯಾದ ಚಂದ್ರನ ಸಾನ್ನಿಧ್ಯದಿಂದ ಕ್ಷೀರಸಾಗರ ಉಬ್ಬಿ ಎಲ್ಲೆಮೀರಿ ಹರಡುತ್ತದೆ. ಅಂತೆಯೇ ಸಹೃದಯರಾದ ಕಲಾಭಿಜ್ಞರ ಸಮ್ಮುಖದಿಂದ ಕಾವ್ಯದ ಕೀರ್ತಿ ಅಧಿಕವಾಗಿ ಬೆಳಗುವುದು. ಜನ ಬದುಕಲೆಂದು, ಬರೆಯಬೇಕೆಂದು ಹರಿಹರ ಹೇಳಿದಂತೆ ಷಡಕ್ಷರಿ ಕಾವ್ಯವನ್ನು ತನಗಾಗಿ ಬರೆದುಕೊಂಡಿಲ್ಲವೆಂದೂ, ಪರೋಪಕಾರಕ್ಕಾಗಿ ಬರೆದೆನೆಂದೂ ಕಾವ್ಯ ಸ್ಪಷ್ಟಪಡಿಸಿರುವುದುಂಟು. ಕವಿ ಎಂದೆಂದೂ ಪರತಂತ್ರನೆಂದು ಅವನ ಅಭಿಪ್ರಾಯ. ಇವನ್ನು ಅವನೇ "ಕವೀಂದ್ರರ್ ಪರೋಪಕೃತಿ ಪರತಂತ್ರರ್" ಎಂಬ ಮಾತುಗಳಲ್ಲಿ ವ್ಯಕ್ತಪಡಿಸಿದ್ದಾನೆ.

ನೀರಸರ ಕಟು ಟೀಕೆಯನ್ನು ಸಹಿಸದ ಷಡಕ್ಷರ ಕವಿ ಅವರ ಬಾಯಿ ಬಡಿಯಲು ಹೇಳಿರುವ ಮಾತೂ ಕಟು ಸತ್ಯವನ್ನು ಹೊರಸೂಸದೆ ಇಲ್ಲ. ಸಾಹಿತ್ಯ ಪ್ರಪಂಚ ಜಾತ್ಯತೀತ. ಅಲ್ಲಿ ಜಾತಿ ಮತಗಳ ವೈಷಮ್ಯ ಕೂಡದು. "ಘನ ಗರ್ಜನೆ" ಹೆಚ್ಚಿದಷ್ಟೂ, ಮೋಡದಿಂದ ಮಳೆ ಸುರಿದು ಮರ್ತ್ಯದ ಬೇಗೆ ಅಡಗುತ್ತದೆ ಅಲ್ಲವೆ? ಹಾಗೆಯೇ ಈ "ಕಳಗರ್ಜನೆ" ಎಂದರೆ ಜಾತ್ಯಂದರ ದೂಷಣೆ ಹೆಚ್ಚಿದಷ್ಟೂ ಕಾವ್ಯರಸದ ಘನತೆ ಗೌರವಗಳು ಮತ್ತಷ್ಟು ಹೆಚ್ಚಲು ಕಾರಣವಾಗುವುದೆಂದು ಗಮನಾರ್ಹವಾಗಿದೆ.

ಷಡಕ್ಷರಿಯ ಅನುಭವದ ಅಗಾಧತೆ ಅನುಪಮ. ಇಂತಹ ಮೇಧಾವಿಗೆ ಕವಿತಾದೇವಿ ತನ್ನ ಹನ್ನೊಂದನೆಯ ವಯಸ್ಸಿನಲ್ಲಿಯೇ ತನ್ನನ್ನು ವರಿಸಿದಳೆಂದು ಹೇಳಿರುವುದೂ ಸುಂದರ ಕಾವ್ಯೋಕ್ತಿಯೇ ಆಗಿದೆ.

ಕಲಿಸಿದೊಡೇಂ ಬರ್ಕುಮೆ ಸ-
ಲ್ಲಲಿತ ಕವಿತ್ವಂ ನಿಸರ್ಗ ಸುಭಗಂ ರಮಣೀ
ವಿಲಸಿತ ರತಿ ರಸ ರಸಿಕತೆ
ತಲೆದೋರ್ಪುದು ತಾನೆ ಕಲಿಸಲೇಂ ಬಂದಪುದೇ

ಕವಿತಾ ಶಕ್ತಿ ಕಲಿತರೆ ಬರುವಂತಹುದಲ್ಲ. ಅದು ಸ್ವಭಾವಸಿದ್ಧವಾಗಿ ಬರಬೇಕು. ಸುಂದರ ತರುಣಿಗೆ ಸುರತೇಚ್ಛೆಯನ್ನು ಯಾರೂ ಕಲಿಸಬೇಕಾದುದಿಲ್ಲ. ಅದು ತನಗೆ ತಾನೇ ಬರುತ್ತದೆ. ಕವಿತ್ವವು ದೈವದತ್ತವಾದ ವರ.

ಷಡಕ್ಷರದೇವ ಮಹಾಕವಿಯೂ ನಿಜ ಯೋಗಿಯೂ ನಿಜ.

ವೈರಾಗ್ಯಸಂಪನ್ನನಾದ ಈ ಯೋಗೀಶ್ವರ ಜನರಂಜನೆಗಾಗಿ ಶೃಂಗಾರ ಕೇಳಿಯ ವರ್ಣನೆಗಳನ್ನು ಮಾಡುವುದೆಂದರೆ ಅಸಹ್ಯ ವಿಚಾರವೆಂದೇ ಹಲವರು ಈತನನ್ನು ಟೀಕೆಮಾಡಿ ದೂಷಿಸುತ್ತಿದ್ದುದೂ ಉಂಟು. ರಾಜಶೇಖರವಿಲಾಸದಲ್ಲಿ ಅಲ್ಲಲ್ಲಿ ವಿಧ ವಿಧವಾದ ನಾಯಕ ನಾಯಿಕೆಯರ ಶೃಂಗಾರ ಕೇಳಿಯ ವರ್ಣನೆಗಳು ಕಾವ್ಯಕ್ಕೆ ರಂಗಿನ ಮೆರುಗನ್ನಿತ್ತಿವೆ. ಇದನ್ನೋದಿದ ಸಮಕಾಲೀನ ಕುಚೋದ್ಯಗಾರ ಸಹೃದಯನೊಬ್ಬನು ಷಡಕ್ಷರ ದೇವನ ಬಳಿಗೆ ಬಂದು ನೆರೆವ ಶಿಷ್ಯಸಮೂಹದಲ್ಲಿ ಈ ವಿಚಾರವಾಗಿ ಪ್ರಸ್ತಾಪಿಸಿಯೇ ಬಿಟ್ಟನು :—

"ಸ್ವಾಮಿ, ತಾವು ಗುರುಪೀಠವನ್ನಲಂಕರಿಸಿರುವ ಯತಿವರ್ಯರು, ಯೋಗಿಗಳು, ಸನ್ಯಾಸಿಗಳು, ವಿರಾಗಿಗಳೂ ಆಗಿರುವಿರಿ. ಆದರೆ ತಮ್ಮ ರಾಜಶೇಖರ ಕಾವ್ಯದಲ್ಲಿ ಶೃಂಗಾರರಸ ಕೋಡಿ ಹರಿದಿದೆ. ರತಿ–ಲೋಲುಪ್ತಿಯುಳ್ಳ ಸಂಸಾರಿಕರಿಗೂ ತಿಳಿಯದ ರತಿರಹಸ್ಯಗಳು ಅತಿ ಕುತೂಹಲಕಾರಿಯಾಗಿ ಆ ಕಾವ್ಯದಲ್ಲಿ ಒಡಮೂಡಿವೆ. ಆದರೆ ಇಂತಹ ರಹಸ್ಯ ಸಂಗತಿಗಳನ್ನು ಅನುಭವವಿಲ್ಲದವರು ಕಾವ್ಯರೂಪದಲ್ಲಿ ರಚಿಸಲು ಸಾಧ್ಯವಾಗುವುದಾದರೂ ಹೇಗೆ ?"

ಕವಿಗೆ ಆತನ ಮನೋಗತ ಮನವರಿಕೆಯಾಯಿತು. ಸ್ತ್ರೀ ಸಂಪರ್ಕದ ಸುಖಾನುಭವವನ್ನು ತಾನು ಪಡೆದಿರಲೇ ಬೇಕೆಂದು ಆತನ ವಾದವೆಂದು ಬಗೆದು ಹಸನ್ಮುಖಿಯಾಗಿ,

"ಅಯ್ಯಾ, ಬಾ ಇಲ್ಲಿ ತೆಗೆದುಕೋ ಈ ಒಂದು ಸವಕಲು ನಾಣ್ಯವನ್ನು" ಎಂದು ಅವನಿಗೆ ಅದನ್ನು ಕೊಟ್ಟನು.

"ಇದನ್ನೇನು ಮಾಡಲಿ ಸ್ವಾಮಿ ?"

"ಇದು ತಾಮ್ರದ ಹಳೆಯ ಕಿಲುಬು ಹಿಡಿದ ಕಾಸು. ಇದನ್ನು ಒಂದು ಶೌಚಕೂಪಕ್ಕೆ ಹಾಕಿಬಿಡು".

"ಹಾಕುವೆನು, ಅನಂತರ ?"

"ನಾನು ಹೇಳಿಕಳುಹಿಸಿದ ದಿನ ಇದನ್ನು ಶೌಚಕೂಪದಿಂದ ತೆಗೆದು ನನಗೆ ತಂದುಕೊಡಬೇಕು"

"ಆಗಲಿ, ತಂದುಕೊಡುವೆನು. ಇದರಿಂದ ಆಗುವ ಪ್ರಯೋಜನವೇನು ?"

"ಅದನ್ನು ಆಮೇಲೆ ಹೇಳುತ್ತೇನೆ"

ಆ ಕುಚೋದ್ಯಗಾರ ಆ ಸವಕಲು ಕಾಸನ್ನು ತೆಗೆದು ಕೊಂಡು ಹೋಗಿ ಶೌಚಕೂಪಕ್ಕೆ ಹಾಕಿದ. ಕೆಲವು ದಿನಗಳ ಬಳಿಕ ಷಡಕ್ಷರಿ ಅದಕ್ಕಾಗಿ ಹೇಳಿಕಳುಹಿಸಿದ. ಆತ ಅಪ್ಪಣೆಯಂತೆ ಆ ಕಾಸನ್ನು ಕವಿಯ ಮುಂದಿಟ್ಟ. ಆ ಕಿಲುಬು ಕಾಸು ಹೊಸ ಹೊಳಪಾದ ನಾಣ್ಯದಂತಿತ್ತು.

"ಇದು ನಾನು ಕೊಟ್ಟಿದ್ದ ಕಿಲುಬು ಕಾಸಲ್ಲವಲ್ಲ" ಎಂದ ಷಡಕ್ಷರಿ.

"ಇದು ತಾವು ಕೊಟ್ಟ ಕಾಸೇ ಆಗಿದೆ ಸ್ವಾಮಿ" ಎಂದು ಉತ್ತರ ಬಂತು.

"ನಾನು ಕೊಟ್ಟದ್ದು ಕರ್ರಗೆ ಕಿಲುಬಾಗಿತ್ತು"

"ನಿಜ. ಆದರೆ ಇದು ಶೌಚಕೂಪದಲ್ಲಿ ಇದುವರೆಗೂ ಇದ್ದುದರಿಂದ ಅದರ ಹುಳಿಗೆ ಕಿಲುಬೆಲ್ಲ ಹೋಗಿ ಹೊಳಪು ಬಂದಿದೆ" ಎಂದಾತ ಹೇಳಿದ.

"ಅಯ್ಯಾ, ನಿನಗೆ ಆ ಶೌಚಕೂಪದ ಅಮೇಧ್ಯದ ಹುಳಿಯ ಅನುಭವ ಹೇಗೆ ಉಂಟಾಯಿತು ? ಸ್ವಯಮೇವ ಅನುಭವಿಸದೆಯೇ ಶೃಂಗಾರ ವರ್ಣನೆಯನ್ನು ಮಾಡಲಾಗುವುದಿಲ್ಲವೆಂದು ಮೊನ್ನೆತಾನೆ ನೀನೇ ಹೇಳಿದೆಯಲ್ಲಾ. ಈಗ ಅ ಹುಳಿಯ ರುಚಿಯನ್ನು ನೀನಾದರೂ ನೋಡಿರುವೆಯಾ ?" ಎಂದು ಪ್ರಶ್ನೆ ಕೇಳಿದ ಕವಿಗೆ ಆತ ಪಶ್ಚಾತ್ತಾಪದಿಂದ ತಲೆ ವಾಗಲೇ ಬೇಕಾಯಿತು. ಆತ ಆತನ ಕ್ಷಮೆಗಾಗಿ ಯಾಚಿಸಿದ.

ಅನುಚಿತಶುಲ್ತೆ ಯೋಗಿ ಜನ ಮುಂಡನ ನೀಂ ಕೃತಿಪೇಳ್ವುದಿಲ್ಲಿ ಕೇಳ್
ಮನಸಿಜ ಕೇಳಿ ಮುಖ್ಯ ಜನರಂಜನ ವರ್ಣನೆಗೈವುದೆಂದು ಸ
ಜ್ಜನರಿದನೆನ್ನದಿರ್ಕೆ ಶಿವಯೋಗಿ ಹರೀಶ್ವರ ಮಲ್ಲಣಾರ್ಯರಿಂ–
ಪಿನ ಪೊಸಕಬ್ಬಮಂ ನೆಗೆಳ್ದರಾನವರಂತಿರೆ ಪೇಳ್ವೆನಿಂತಿದಂ

ಶಿವಯೋಗಿಗಳೆಂದು ಖ್ಯಾತರಾಗಿ ಮೆರೆದ ಹಂಪೆಯ ಹರಿಹರ, ಗುಬ್ಬಿಯ ಮಲ್ಲಣಾರ್ಯ-ಇವರು ಎಲ್ಲ ಬಗೆಯ ವರ್ಣನೆಯುಳ್ಳ ಇಂಪಿನ ರಸಭರಿತ ಕಾವ್ಯಗಳನ್ನು ರಚಿಸಿರುವಂತೆಯೇ ನಾನೂ ರಚಿಸಿರುವೆನೆಂದು ಹೇಳಿರುವುದು "ಮಹಾಜನಾಃ ಏನಗತಾ ಸ ಪಂಥಾಃ" ಎಂಬ ಮಾತನ್ನು ದೃಢೀಕರಿಸುತ್ತದೆ. ಮಹಾಜನರು ನಡೆದ ದಾರಿಯಲ್ಲಿ ಸಾಗುವುದೇ ಉತ್ತಮವೆಂದು ಇದರ ಅಭಿ ಪ್ರಾಯ.

—ಸಶೇಷ

○○○○

"ಹಾಲಕಂದಲು ತುಪ್ಪದ ಮಡಕೆಯ ಬೋಡುಮುಕ್ಕೆನಬೇಡ" —ಶ್ರೀ ಬಸವೇಶ್ವರರು

# ಜಗದೀಶ ಹಾಲ್

## ಬಸ್ ಸ್ಟ್ಯಾಂಡ್, ಕ್ಯಾತ್ಸಂದ್ರ

ನಮ್ಮಲ್ಲಿ ಎಲ್ಲಾ ವಿಧವಾದ ಷರಟಿಂಗ್, ಸಿಲ್ಕ್ ಸೀರೆಗಳು, ಜಮುಖಾನೆಗಳು, ಖಾದಿ ಬಟ್ಟೆ, ಕೈಮಗ್ಗದ ಬಟ್ಟೆಗಳು ದೊರೆಯುತ್ತವೆ.

ನ್ಯಾಯವಾದ ಬೆಲೆ, ನಮ್ಮ ಸೇವೆಗೆ ಇಂದೇ ಭೇಟಿ ಕೊಡಿ.

For all kinds of Mill & Handloom clothes

Visit

## Jagadeesha Hall

BUS STAND, KYATHSANDRA

---

ನಮ್ಮ ಸೇವೆಗೆ! ಎಲ್ಲ ಸೌಕರ್ಯಕ್ಕೆ!

# ವೀರಶೈವರ ಕಾಫಿಕ್ಲಬ್

## ಬಸ್ ಸ್ಟ್ಯಾಂಡ್, ಕ್ಯಾತ್ಸಂದ್ರ

- ○ ಶುಚಿ ಮತ್ತು ರುಚಿಕರವಾದ ತಿಂಡಿ ಪದಾರ್ಥಗಳಿಗೂ,
- ○ ಊಟ ಮತ್ತು ತಂಪಾದ ಪಾನೀಯಗಳಿಗೆ ಹೆಸರಾದ ಏಕೈಕ ಹೋಟೆಲ್
- ○ ಸ್ಪೆಷಲ್ ಕ್ವಾಲಿಟಿ ಕಾಫಿ
- ○ ಆರೋಗ್ಯಕ್ಕೆ ಮುಖ್ಯ ಗಮನ
- ○ ವಿನಯದ ಸೇವೆ

● ನಮ್ಮ ವೈಶಿಷ್ಟ್ಯ

---

ಫೋನ್ : 110 ಗ್ರಾಂ : "ಗಜಾನನ"

# ಗಜಾನನ ಕಬ್ಬಿಣದ ಡಿಪೋ

(ರಿಜಿಸ್ಟರ್ಡ್ ಸ್ಟಾಕ್ ಹೋಲ್ಡರ್ಸ್ ಆಫ್ ಐರ್ನ ಅಂಡ್ ಸ್ಟೀಲ್)

## ಮಂಡಿಪೇಟೆ : : ತುಮಕೂರು

ಹೆಚ್ಚು ಬಾಳಿಕೆ ಬರುವ ಸುಪ್ರಸಿದ್ಧವಾದ "ಚಾರ್ ಮಿನಾರ್" ಬ್ರಾಂಡ್ ಅಸ್‌ಬೆಸ್ಟೋಸ್ ಸಿಮೆಂಟ್ ಷೀಟುಗಳೂ, ಸಿಮೆಂಟ್ ಪೈಪುಗಳೂ, ಬೆಂಡುಗಳೂ, ಷೂಗಳೂ ಎಲ್ಲಾ ಸೈಜಿನಲ್ಲೂ ದೊರೆಯುತ್ತವೆ.

ಡ್ಯೂಕೋ, ಡ್ಯೂಲೆಕ್ಸ್, ಸ್ಪಾರ್ಟ್ರ, ಷಾಲಿಮಾರ್ ಬಣ್ಣಗಳೂ, ವೆಲ್ಡ್‌ಮೆಷ್, ಎಕ್ಸ್‌ಪಾಂಡೆಡ್ ಮೆಟಲ್ ಸಹಾ ದೊರೆಯುತ್ತೆ.

▲

ಕಂಟ್ರೋಲ್ ದರದಲ್ಲಿ ಎಲ್ಲಾ ವಿಧವಾದ ಕಬ್ಬಿಣ ಯಾವಾಗಲೂ ದೊರೆಯುತ್ತದೆ.

▼



ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಮಹಾ ಪಾಠಶಾಲಾ



ಶ್ರೀ ಸಿದ್ಧಗಂಗಾ ಮಠಾಧೀಶ ಶ್ರೀ।ನಿ।ಪ್ರ। ಶಿವಕುಮಾರಸ್ವಾಮಿಗಳವರು ಶ್ರೀ ಕ್ಷೇತ್ರದ
ವಿದ್ಯಾರ್ಥಿಗಳೊಡನೆ ನಿಂತಿರುವರು




# 'ಗೀರ್ವಾಣ ಭಾಷಾ ಪರಿಚಯ'

ವಿದ್ವಾನ್ ವೈ. ಕೆ. ಚಂದ್ರಶೇಖರಶಾಸ್ತ್ರಿ

"ಕವಿ ಭುವನ ಭಾಸ್ವತೀಂ ತಾಂ ಭಾರತೀಂ ಸಾದರಂ ಸಮುಧಿಗಮ್ಯತಾಂ" ಅಭಿಮಾನಪೂರ್ವಕ ಈ ಉಪದೇಶದಂತೆ ಅಲ್ಪಸ್ವಲ್ಪವಾದರೂ ಈ ಗೀರ್ವಾಣ ಭಾಷೆಯನ್ನು ಅಭ್ಯಾಸ ಮಾಡುವುದು ನಮ ಕರ್ತವ್ಯ. ಅಮೂಲ್ಯವಾದ ಗ್ರಂಥಗಳು ಈ ಸಂಸ್ಕೃತ ಭಾಷೆಯಲ್ಲಿವೆ ವಿದೇಶೀಯರು ಈ ಭಾಷೆಯ ಘನತೆಯ ಬಗ್ಗೆ ಮೆಚ್ಚಿ ಪ್ರಾಚೀನ ಗ್ರಂಥಗಳನ್ನು ಆಸಕ್ತಿಯಿಂದ ಅಭ್ಯಾಸ ಮಾಡಿದ್ದಲ್ಲದೆ ಆಳವಾಗಿ ವಿಮರ್ಶಿಸಿರುವರು ನಮ್ಮ ದೇಶದಲ್ಲಿ ಈ ಭಾಷೆಯನ್ನು ಅಭ್ಯಾಸ ಮಾಡುವವರ ಸಂಖ್ಯೆ ದಿನೇ ದಿನೇ ಹೆಚ್ಚಬೇಕು. ಕ್ಲಿಷ್ಟವಾದ ಭಾಷೆಯನ್ನು ಅಭ್ಯಾಸ ಮಾಡುವುದು ಕಷ್ಟ. ಈ ವಿಜ್ಞಾನಯುಗದಲ್ಲಿ ಭೌತಿಕ ಸುಖಾಪೇಕ್ಷಿಗಳಿಗೆ ಈ ಭಾಷೆಯಿಂದ ಅಪೇಕ್ಷಿತ ಸಹಾಯ ದೊರೆಯಲಾರದು. ಈ ಕಾರಣಗಳಿಂದಾಗಿ ಈ ಸಂಸ್ಕೃತ ಭಾಷೆಯ ವಿಷಯದಲ್ಲಿ ಅನಾದರಭಾವನೆ ತೋರುತ್ತಿರುವಂತೆ ಕಂಡು ಬರುತ್ತಿದೆ. ಆದರೆ ಸಂಸ್ಕೃತ ಗ್ರಂಥಗಳನ್ನು ಆಳವಾಗಿ ಪರಿಶೋಧಿಸಿದಲ್ಲಿ ಒಂದಾನೊಂದು ಕಾಲದಲ್ಲಿ ಆಧ್ಯಾತ್ಮಿಕ ಮತ್ತು ನೈತಿಕ ತಳಹದಿಯ ಮೇಲೆ ಕಟ್ಟಿರತಕ್ಕ ಭದ್ರವಾದ ಸಮಾಜವಿತ್ತೆಂದು ತೋರುತ್ತದೆ. ಈಗಿನ ವಿಜ್ಞಾನ ಪ್ರಪಂಚದಲ್ಲಿ ಕೇವಲ ಐಹಿಕ ಸುಖಾಪೇಕ್ಷೆಯತ್ತ ಜನರ ಮನಸ್ಸು ಧಾವಿಸುತ್ತಿರುವುದರಿಂದ ಆಧ್ಯಾತ್ಮಿಕ ಮತ್ತು ನೈತಿಕ ಸಂಬಂಧವಾದ ಗ್ರಂಥಗಳಲ್ಲಿ ಜನರ ಆಸಕ್ತಿ ಕಡಿಮೆ. ಈಗಿನ ಸಮಾಜದಲ್ಲಿ ಕಂಡು ಬರತಕ್ಕ ಅನೈತಿಕಭಾವನೆ ದೂರವಾಗಬೇಕಾದರೆ ಅಮೂಲ್ಯ ಗ್ರಂಥಗಳನ್ನು ಅಭ್ಯಾಸಮಾಡಿ ಆ ಗ್ರಂಥಗಳ ಉದಾತ್ತ ತತ್ವಗಳನ್ನು ಅನುಷ್ಠಾನಕ್ಕೆ ತರುವಂತೆ ಪ್ರಯತ್ನಿಸಿದರೆ ಮಾತ್ರ ಸಾಧ್ಯ.

ಭಾಷಾ ಪರಿಚಯವಿಲ್ಲದ ಅಂಥ ಗ್ರಂಥಗಳನ್ನು ಅರ್ಥ ಮಾಡಿಕೊಳ್ಳುವುದಾದರೂ ಕಷ್ಟವಾದದ್ದೆ. ಈ ಸಂಸ್ಕೃತ ಭಾಷಾ ಪ್ರಚಾರಕ್ಕಾಗಿ ಘನ ಸರ್ಕಾರದವರು ಅಪಾರವಾಗಿ ಹಣವನ್ನು ವಿನಿಯೋಗಿಸುತ್ತಿರುವರು. ಅನನುಕೂಲತೆಯಿಂದಲೊ ಅನಾಸಕ್ತಿಯಿಂದಲೋ ನಿಯತವಾಗಿ ಶಾಲಾ ಕಾಲೇಜುಗಳಿಗೆ ಹೋಗಿ ಸಂಸ್ಕೃತ ಭಾಷೆಯನ್ನು ಅಭ್ಯಾಸ ಮಾಡುವವರ ಸಂಖ್ಯೆ ಬಹಳ ಕಡಿಮೆ. ಆದರೆ ಇತ್ತೀಚೆಗೆ ಪಾಕ್ಷಿಕ, ಮಾಸಿಕ, ತ್ರೈಮಾಸಿಕ ಮೊದಲಾದ ಪತ್ರಿಕೆಗಳಲ್ಲಿ ಸಂಸ್ಕೃತ ಭಾಷಾ ಪ್ರಚಾರವು ಕಂಡು ಬರುತ್ತಿರುವುದು. ಇದು ಭಾಷಾ ಪ್ರಚಾರಕ್ಕೆ ಅತ್ಯುತ್ತಮ ಮಾರ್ಗವೆಂಬುದರಲ್ಲಿ ಸಂದೇಹವಿಲ್ಲ. ಭಾಷಾಭಿಮಾನಿಗಳ ಅಪೇಕ್ಷೆಯಂತೆ ಈ ಸಂಚಿಕೆಯಲ್ಲಿ ಸಾಧ್ಯವಾದಷ್ಟು ಸುಲಭವಾದ ರೀತಿಯಲ್ಲಿ ಸಂಸ್ಕೃತ ಭಾಷಾ ಪರಿಚಯ ಮಾಡಿಕೊಳ್ಳುವ

ಮಾರ್ಗವನ್ನು ತೋರಿಸಲಾಗಿದೆ. ನೀರಕ್ಷೀರ ನ್ಯಾಯದಂತೆ ಭಾಷಾಜ್ಞಾನಕ್ಕೆ ಉಪಯುಕ್ತವಾದ ವಿಷಯಗಳನ್ನು ಮಾತ್ರ ಗ್ರಹಿಸುವುದು ಸೂಕ್ತ. ವರ್ಣಮಾಲಾ ಪರಿಚಯದ ಆವಶ್ಯಕತೆ ಇಲ್ಲದ ಕಾರಣ ಈ ಸಂಚಿಕೆಯಲ್ಲಿ ನಾಮಪದ ಮತ್ತು ಕ್ರಿಯಾ ಪದಗಳ ಪರಿಚಯವನ್ನು ಮಾಡಿಕೊಳ್ಳಬಹುದು.

### ನಾಮ ಪದಗಳು Nouns

ನಾಮಪದದ ಮೂಲರೂಪಕ್ಕೆ "ಪ್ರಾತಿಪದಿಕ" (Un-inflected Noun) ಎಂದು ಹೆಸರು. ಈ ಮೂಲರೂಪಕ್ಕೆ "ಸುಪ್" ಎಂಬ ಸಂಜ್ಞೆಯಿಂದ ಕೂಡಿದ (21) ಇಪ್ಪತ್ತೊಂದು ವಿಭಕ್ತಿ ಪ್ರತ್ಯಯಗಳನ್ನು ಸೇರಿಸುವುದರಿಂದ ಪ್ರಯೋಗಾರ್ಹ ವಾದ ನಾಮಪದಗಳಾಗುತ್ತವೆ. ಇದನ್ನು ಸುಬಂತವೆಂದೂ ಕರೆಯುವರು (Inflexion of Nouns)

ಉದಾಹರಣೆ :

ಪ್ರಾತಿಪದಿಕ ಸುಪ್ ಪ್ರತ್ಯಯ ಪ್ರಯೋಗ ಅರ್ಥ

ರಾಮ+ಸು=ರಾಮಃ ರಾಮನು. (ಉ,ಪ್ರ.ವಿ)

ರಾಮ+ಅಮ್=ರಾಮಂ ರಾಮನನ್ನು (ಅನ್ನು,ದ್ವಿ.ವಿ.)

ಇದರಂತೆ ಹರಿಃ, ಗುರುಃ, ಶಿವಃ, ವೃಕ್ಷಃ ಇವುಗಳನ್ನು ತಿಳಿಯ ಬೇಕು.

(ಸೂಚನೆ : ಪ್ರಥಮಾ ಮತ್ತು ದ್ವಿತೀಯಾ ವಿಭಕ್ತಿಗಳ ಪರಿಚಯವನ್ನು ಮಾತ್ರ ತಿಳಿಸಲಾಗಿದೆ. ಉಳಿದ ವಿಭಕ್ತಿಗಳ ಪರಿಚಯವನ್ನು ಮುಂದಿನ ಪಾಠಗಳಲ್ಲಿ ಪರಿಚಯ ಮಾಡಿ ಕೊಳ್ಳಬಹುದು.)

### ಕ್ರಿಯಾಪದ Verb

ಕ್ರಿಯಾಪದದ ಮೂಲರೂಪಕ್ಕೆ "ಧಾತು" (Verb-Root) ಎಂದು ಹೆಸರು. ಈ ಧಾತುವಿಗೆ "ತಿಙ್" ಸಂಜ್ಞೆ ಯಿಂದ ಕೂಡಿರತಕ್ಕ ಕ್ರಿಯಾ ಪ್ರತ್ಯಯಗಳನ್ನು ಸೇರಿಸಿದರೆ ಪ್ರಯೋಗಾರ್ಹವಾದ ಕ್ರಿಯಾಪದಗಳಾಗುತ್ತವೆ. ಇದನ್ನು ತಿಙಂತ (Conjugation of Verbs) ಎಂದು ಕರೆಯು ವರು. ಈ "ತಿಙ್" ಪ್ರತ್ಯಯಗಳಿಗೆ "ಲಕಾರಾದೇಶ ಪ್ರತ್ಯಯ" ಗಳೆಂದೂ ಕರೆಯುವರು. ಆದ್ದರಿಂದ ಪ್ರತಿಯೊಂದು ಧಾತು ವಿಗೂ ಕಾಲಸೂಚಕವಾದ (6) ಆರು ಅರ್ಥ ಸೂಚಕವಾದ (4) ನಾಲ್ಕು ಒಟ್ಟು (10) ಹತ್ತು ಲಕಾರಗಳಿವೆ.

#### ಕಾಲಸೂಚಕ ಲಕಾರಗಳು Tenses

| | ಲಕಾರ | ಕಾಲ | Tense |
|---|---|---|---|
| 1) | ಲಟ್ | ವರ್ತಮಾನ | Present |
| 2) | ಲಙ್ | ಅನದ್ಯತನ ಭೂತ | Imperfect |
| 3) | ಲಿಟ್ | ಪರೋಕ್ಷ ಭೂತ | Perfect |
| 4) | ಲುಙ್ | ಭೂತ | Aorist |
| 5) | ಲುಟ್ | ಭವಿಷ್ಯತ್ | First future |
| 6) | ಲೃಟ್ | ಅನದ್ಯತನ ಭವಿಷ್ಯತ್ | Second future |

#### ಅರ್ಥ ಸೂಚಕ ಲಕಾರ Moods

| | | | |
|---|---|---|---|
| 1) | ಲೋಟ್ | ಆಜ್ಞಾರ್ಥ | Imperative |
| 2) | ವಿಧಿಲಿಙ್ | ವಿಧ್ಯರ್ಥ | Potential |
| 3) | ಆಶೀರ್ಲಿಙ್ | ಆಶೀರರ್ಥ | Benedictive |
| 4) | ಲೃಙ್ | ಸಂಕೇತಾರ್ಥ | Conditional |

ಹೀಗೆ ಹತ್ತು ಲಕಾರಗಳು.

(ಸೂಚನೆ : ಈ ಪಾಠದಲ್ಲಿ ವರ್ತಮಾನ ಕಾಲದ ಪ್ರತ್ಯಯಗಳನ್ನು ತಿಳಿಸಿ, ಕ್ರಿಯಾ ರೂಪಗಳನ್ನು ತೋರಿಸ ಲಾಗಿದೆ )

ಲಕಾರಾದೇಶ ಪ್ರತ್ಯಯಗಳು "ಪರಸ್ಮೈಪದ" "ಆತ್ಮನೇ ಪದ" ಎಂದು ಎರಡು ವಿಧ.

#### ಪರಸ್ಮೈ ಪದ ಲಟ್ Present

| | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮ ಪುರುಷ | ತಿ | ತಃ | ಅಂತಿ |
| ಮಧ್ಯಮ ಪುರುಷ | ಸಿ | ಥಃ | ಥ |
| ಉತ್ತಮ ಪುರುಷ | ಮಿ | ವಃ | ಮಃ |

#### ಆತ್ಮನೇ ಪದ :

| | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮ ಪುರುಷ | ತೆ | ಇತೆ | ಅಂತೆ |
| ಮಧ್ಯಮ ಪುರುಷ | ಸೆ | ಇಥೆ | ಧ್ವೇ |
| ಉತ್ತಮ ಪುರುಷ | ಎ | ವಹೆ | ಮಹೆ |

"ಲಟ್" ವರ್ತಮಾನ ಕಾಲದ ಕೆಲವು ಮಾದರಿಗಳನ್ನು ಕೊಡಲಾಗಿದೆ. "ಭೂ" ಧಾತು ಅರ್ಥ ಇರು

(ಭವತಿ=ಇರುತ್ತಾನೆ, ಇರುತ್ತಾಳೆ. ಇರುತ್ತದೆ)

| | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮ ಪುರುಷ | ಭವತಿ | ಭವತಃ | ಭವಂತಿ |
| ಮಧ್ಯಮ ಪುರುಷ | ಭವಸಿ | ಭವಥಃ | ಭವಥ |
| ಉತ್ತಮ ಪುರುಷ | ಭವಾಮಿ | ಭವಾವಃ | ಭವಾಮಃ |

#### ಆತ್ಮನೇ ಪದಿ :

| | ಏಕವಚನ | ದ್ವಿವಚನ | ಬಹುವಚನ |
|---|---|---|---|
| ಪ್ರಥಮ ಪುರುಷ | ಏಧತೆ | ಏಧೇತೇ | ಏಧಂತೇ |
| ಮಧ್ಯಮ ಪುರುಷ | ಏಧಸೇ | ಏಧೇಥೇ | ಏಧಧ್ವೇ |
| ಉತ್ತಮ ಪುರುಷ | ಏಧೇ | ಏಧಾವಹೇ | ಏಧಾಮಹೇ |

ಇದರಂತೆ:

ಪರಸ್ಮೈಪದಿ—ಪಠತಿ, ಪಚತಿ, ಲಿಖತಿ, ಹರತಿ ಇತ್ಯಾದಿ

ಆತ್ಮನೇ ಪದಿ—ಲಭತೆ, ವರ್ತತೆ, ಮೋದತೆ ಇತ್ಯಾದಿ

(ಮುಂದುವರಿಯುವುದು)

# ನಾಹಂ ಕರ್ತಾ ಹರಿಃ ಕರ್ತಾ

(ಕವಿ ಜೀವನ)

ಶ್ರೀ ಸಗರ ಕೃಷ್ಣಾಚಾರ್ಯ, ಎಂ.ಎ.,ಬಿ.ಟಿ.

ನಾನು ಸಾಹಿತ್ಯಕ್ಷೇತ್ರದಲ್ಲಿ ಕಾಲಿಟ್ಟುದೂ ಒಂದು ವಿಚಿತ್ರ ಯೋಗ ನಮ್ಮ ಮನೆತನ ಪ್ರತಿಭಾವಂತ ಪಂಡಿತರ ಮನೆತನವೇನೋ ಅಹುದು. ನಮ್ಮ ಪೂರ್ವಜರು ಸಂಸ್ಕೃತ ಸಾಹಿತ್ಯವನ್ನೂ ಕರತಲಾಮಲಕ ಮಾಡಿಕೊಂಡು, ವೇದ ವೇದಾಂಗಗಳನ್ನೂ, ಪುರಾಣೇತಿಹಾಸಗಳನ್ನೂ, ಕೂಲಂಕಷವಾಗಿ ಅಭ್ಯಸಿಸಿ, ಕೆಲವು ಗ್ರಂಥಗಳಿಗೆ ಸುಂದರ ಟೀಕೆ ಟಿಪ್ಪಣಿಗಳನ್ನೂ ಬರೆದು ಖ್ಯಾತಿಪಡೆದಿದ್ದರು. ಅಂತೆಯೇ ನಮ್ಮ ಮನೆತನದ ಮೂಲಪುರುಷರಾದ ಶ್ರೀ ಪ್ರದ್ಯುಮ್ನಾಚಾರ್ಯರು ಉತ್ತರಾಧಿ ಮಠದ ಶ್ರೀ ಶ್ರೀಮದ್ವೇದನಿಧಿ ತೀರ್ಥ ಶ್ರೀಪಾದಂಗಳವರಾಗಿ, ಆಸೇತು ಹಿಮಾಚಲ ಪರ್ಯಂತ ತಮ್ಮ ಪಾಂಡಿತ್ಯವನ್ನೂ, ಪ್ರತಿಭೆಯನ್ನೂ ಮೆರೆದು ಕೀರ್ತಿಶೇಷರಾಗಿದ್ದರು. ನಾನು ಸಣ್ಣವನಿದ್ದಾಗ ಅವರ ವಾಗ್ಝರಿ ಹರಿಯುತ್ತಿದ್ದಾಗಲೆಲ್ಲ ಮಿಂದು ಪರಿಶುದ್ಧನಾಗಿದ್ದೇನೆ. ಅವರು ಹೆಣ್ಣು ಮಕ್ಕಳಿಗಾಗಿ ಕಟ್ಟಿಕೊಡುತ್ತಿದ್ದ ದೇವರ ನಾಮಗಳನ್ನೂ ಆರುತಿಯ ಪದಗಳನ್ನೂ ಕೇಳಿ ಹಾಡಿ ಕುಣಿದಾಡಿದ್ದೇನೆ. ಅದರ ಫಲವಾಗಿಯೇ ಏನೋ ನನ್ನಲ್ಲಿಯೂ ಕವಿತೆ ಕಟ್ಟಿ ಹಾಡಬೇಕೆಂಬ ಆಶಾಂಕುರ ಮೂಡಿದ್ದು.

ನಾನು ಸಾಹಿತ್ಯ ಕ್ಷೇತ್ರದಲ್ಲಿ ಕಾಲಿಟ್ಟುದು ಓರ್ವ ಕವಿಯಾಗಿ. ಅದೂ ಕವಿತ್ವದ ಗಂಧವೂ ಮೂಸದ ಎಳೆತನದಲ್ಲಿ. ಹಿರಿಯರು ಏನೋ ಕಟ್ಟಿ ಹಾಡುತ್ತಾರೆ, ಹಾಡಿಸುತ್ತಾರೆ, ನಾನೂ ಹಾಗೆಯೇ ಮಾಡಬೇಕು ಎಂಬ ಚಾಪಲ್ಯವೇ ನನ್ನನ್ನು ಕವಿಗಳ (ದಾಸಾನುದಾಸರ) ಸಾಲಿನಲ್ಲಿ ನಿಲ್ಲಿಸಿತು. ಮೊದಮೊದಲು ಚೇಳಿನ ಮಂತ್ರ ಬಾರದೆ ಹಾವಿನ ಹೆಡೆಯನ್ನು ತುಳಿಯುತ್ತಿದ್ದೇನಲ್ಲ ಎನ್ನಿಸುತ್ತಿತ್ತು! ಆದರೆ ನನ್ನಲ್ಲಿ ಜಾಗ್ರತವಾಗಿದ್ದ ಪ್ರತಿಭೆ ನನ್ನನ್ನು ಸುಮ್ಮನಿರಗೊಡಲಿಲ್ಲ. ಅದೇ ಸಮಯದಲ್ಲಿ ನಾನು ಮೆಟ್ರಿಕ್ ಅಭ್ಯಾಸಕ್ಕಾಗಿ ಕಲ್ಬುರ್ಗಿಗೆ ಬಂದಿದ್ದೆ. ಹೊಸ ಪಟ್ಟಣ, ಹೊಸ ಸನ್ನಿವೇಶ, ಅದರಲ್ಲೂ ವಾಚನಾಲಯದ ಅನುಕೂಲ, ಶಾಲೆಯೂ ನೂತನ ವಿದ್ಯಾಲಯ, ಆದರೂ ಕನ್ನಡ ದೇಶದಲ್ಲಿಯೇ ಕನ್ನಡ ತಬ್ಬಲಿ ಮಗುವಿನಂತೆ ಮೈಮುದುರಿಕೊಂಡಿತ್ತು. ಅಂಥ ಸಂಧಿಕಾಲದಲ್ಲಿ ನಾನು 'ಪ್ರಬುದ್ಧ ಕರ್ನಾಟಕ' ಮತ್ತು 'ಜಯಂತಿ' ಮುಂತಾದ ಕನ್ನಡದ ಕೆಚ್ಚನ್ನೇ ಹೊರಸೂಸುವ ಪತ್ರಿಕೆಗಳನ್ನು ಬಹು ಆಸ್ಥೆಯಿಂದ ಓದುತ್ತಿದ್ದೆ. ನನಗಾಗ, ನಾನಿದ್ದ ಮನೆಯ ಯಜಮಾನರಾದ ಶ್ರೀ ಲಾಳಗೇರಿ ಗೋವಿಂದರಾಯರ ಸ್ವಂತದ ಪುಸ್ತಕ ಭಂಡಾರವೂ ಬಹಳ ಉಪಯೋಗಕ್ಕೆ ಬಂದಿತು. ನಾನೊಂದುಸಲ ಪ್ರಬುದ್ಧ ಕರ್ಣಾಟಕವನ್ನು ಕೈಯಲ್ಲಿ ಹಿಡಿದುಕೊಂಡು ಅದರಲ್ಲಿ ಪ್ರಕಟವಾದ 'ಕುವೆಂಪು' ಅವರ ಒಂದು ಪದ್ಯವನ್ನು ತಲ್ಲೀನತೆಯಿಂದ ಓದುತ್ತಿದ್ದಾಗ, ನನಗರಿಯದಂತೆ ನಮ್ಮ ವಿದ್ಯಾಗುರುಗಳಾದ ದಿವಂಗತ ಕಾನ್ನಾಳ ರಂಗರಾಯರು ನನ್ನ ಬೆನ್ನು ತಟ್ಟಿ, 'ಕೃಷ್ಣಾಚಾರ್ಯ' ನೀವು 'ಪ್ರಬುದ್ಧ ಕರ್ಣಾಟಕವನ್ನೋದುವಷ್ಟು ಪ್ರಬುದ್ಧರಾಗಿದ್ದೀರಾ?' ಎಂದು ನಗುತ್ತ ಕೇಳಿದರು. ಅವರು ಕೇಳಿದುದು ವಾಸ್ತವವೇ ಆಗಿತ್ತು. ಆ ಕಾಲದಲ್ಲಿ ಪ್ರಬುದ್ಧ ಕರ್ಣಾಟಕವನ್ನು ಕೇವಲ ಇಲ್ಲಿಯ ಪ್ರಬುದ್ಧ ಸಾಹಿತಿಗಳೇ ಓದಿ ಅರ್ಥ ಮಾಡಿಕೊಳ್ಳುತ್ತಿದ್ದರು. ಏಕೆಂದರೆ, ಹೈದರಾಬಾದು ಕರ್ಣಾಟಕದಲ್ಲಿ ಕನ್ನಡಕ್ಕೆ ಸರಿಯಾದ ಮನ್ನಣೆಯಿರಲಿಲ್ಲ, ಕನ್ನಡದ ಕೂಗು ಅದೇ ಆರಂಭವಾಗಿತ್ತು. ಎಲ್ಲೋ ಒಬ್ಬಿಬ್ಬರು ಕನ್ನಡದಲ್ಲಿ ನಾಲ್ಕಕ್ಷರ ಬರೆಯುವ ಸಾಹಸ ಮಾಡಿದವರು ಯಾರೂ ಇರಲಿಲ್ಲ. ಅದಕ್ಕಾಗಿಯೇ ಇನ್ನೂ ಎಂಟನೆಯ ತರಗತಿಯಲ್ಲಿ ಓದುತ್ತಿದ್ದ ನಾನು, 'ಪ್ರಬುದ್ಧ ಕರ್ಣಾಟಕ' ಪತ್ರಿಕೆಯನ್ನು ಹಿಡಿದದ್ದು ಅವರಿಗೆ ಸೋಜಿಗವೆನಿಸಿರಬೇಕು. ನಾನಂದು ಅದರಲ್ಲಿಯ ಒಂದೆರಡು ಪದ್ಯಗಳನ್ನೋದಿ ಆನಂದಿತನಷ್ಟೇ ಆಗದೆ, ನಾನೇಕೆ ಇಂಥ ಪದ್ಯಗಳನ್ನು ಬರೆಯಬಾರದು ? ಎಂದು ಅದೇ ಧಾಟಿಯಲ್ಲಿ 'ಶ್ರೀ ಲಕ್ಷ್ಮೀನೃಸಿಂಹ ಸ್ತೋತ್ರ' ವೆಂಬ ಪದ್ಯವನ್ನು ಮೊದಲು ಬರೆದೆ! ಆ ತರುವಾಯ, 'ಸರಸ್ವತೀಸ್ತವನ' ವೆಂಬುದನ್ನೂ ರಚಿಸಿದೆ. ನಾನು ಚಿಕ್ಕಂದಿನಿಂದಲೂ ಭಾವುಕನಾದುದರಿಂದ ಮೊದಲು ಕುಲಸ್ವಾಮಿಯನ್ನು, ಆ ತರುವಾಯ

ವಿದ್ಯಾಭಿಮಾನಿ ದೇವತೆಯಾದ ತಾಯಿ ಶಾರದೆಯನ್ನೂ ಸ್ತುತಿಸಿಯೇ ಕಾವ್ಯಸರಸಿಯಲ್ಲಿಯ ಮಧುವನವನ್ನು ಮರಿದುಂಬಿಯಾಗಿ ಪ್ರವೇಶಿಸೋಣ ಎಂದು ನಿಶ್ಚಯಿಸಿದ್ದು. ಛಂದಸ್ಸಿನ ಜ್ಞಾನವಿಲ್ಲದಿದ್ದರೂ ಪ್ರಬುದ್ಧ ಕರ್ನಾಟಕದಲ್ಲಿ ಬಂದ ಕವನಗಳ ಧಾಟಿಯಲ್ಲೇ ನನ್ನ ಕವನಗಳನ್ನು ಹೆಣೆದಿದ್ದಾಯಿತು. ನನ್ನನ್ನೂ ಕವಿಗಳ ಮಾಲಿಕೆಯಲ್ಲಿ ಸೇರಿಸಿಕೊಂಡುದೂ ಆಯಿತು. ಆದರೆ ನಾನು ಕವಿಯ ಬದಲು 'ಕಪಿ' ಯಾಗಿದ್ದೇನೆಂಬುದು ಆ ತರುವಾಯದ ಒಂದು ಘಟನೆಯಿಂದ ತಿಳಿಯಿತು.

ನಾವು ಇದಕ್ಕೂ ಮುಂಚೆಯೇ ಸ್ಥಾಪಿಸಿಕೊಂಡಿದ್ದ ಶ್ರೀ ವೇಣುಗೋಪಾಲ ವಾಚನಾಲಯದ ಮುಖಾಂತರ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳನ್ನು ಸಣ್ಣ ಪ್ರಮಾಣದ ಮೇಲೆ ಯಾಕಾಗಲೊಲ್ಲದೆಂದು ತಪ್ಪದೆ ನಡೆಸುತ್ತಿದ್ದೆವು. ಹಗಲು ಸಮಯ ಸಿಕ್ಕಾಗಲೆಲ್ಲ ವಕ್ತೃತ್ವ ಸ್ಪರ್ಧೆಗಳನ್ನೇರ್ಪಡಿಸುತ್ತಿದ್ದೆವು. ಸಂಜೆಯ ಸಮಯ ನಮ್ಮ ಮನೆಯ ಮುಂದಿನ ಹನುಮಂತ ದೇವರ (ಈಗ ಶ್ರೀ ವೆಂಕಟರಮಣನ) ಗುಡಿಯಲ್ಲಿ ಭಜನೆ ಮಾಡುತ್ತಿದ್ದೆವು. ಪ್ರತಿದಿನ ಸಾಧ್ಯವಾಗದಿದ್ದರೂ ಪ್ರತಿ ಶನಿವಾರ ಭಜನೆ ತಪ್ಪುತ್ತಿರಲಿಲ್ಲ. ಕಲ್ಬುರ್ಗಿಯಲ್ಲಿ ಪ್ಲೇಗಿನ ಹಾವಳಿ ಆರಂಭವಾದುದರಿಂದ ಶಾಲೆಗೆ ಬಿಡುವು ದೊರೆತಿತ್ತು. ನಾನೂ ನಮ್ಮೂರಿಗೆ ಬಂದು ಜೊತೆಯವರೊಡನೆ ಸೇರಿದ್ದೆ. ಒಂದು ಶನಿವಾರ ನನಗೆ ಎಲ್ಲಿಂದಲೋ ಸ್ಫೂರ್ತಿ ಬಂತು. ಹನುಮಂತದೇವರ ಮೇಲೆ ಒಂದು ಪದ್ಯ ಕಟ್ಟಿದೆ, ಮಿತ್ರರಿಗೆ ತೋರಿಸಿದೆ. ಒಬ್ಬೊಬ್ಬರಿಗೆ ಅದು ಬಲು ಹಿಡಿಸಿತು ಅದನ್ನು ಕಂಠಪಾಠಮಾಡಿ ಅಂದಿನ ರಾತ್ರಿಯ ಭಜನೆಯ ಸಮಯದಲ್ಲಿ ಹಾಡಿಯೇಬಿಟ್ಟರು. ದೂರದಲ್ಲಿ ಕುಳಿತು ಕೇಳುತ್ತಿದ್ದ ನಮ್ಮ ದೊಡ್ಡಪ್ಪನವರಿಗೆ-ಸಹಸ್ರ ಚೇಳು ಕುಟುಕಿದಷ್ಟು ನೋವಾಗಿರಬಹುದು. ಧಾವಿಸುತ್ತ ಬಂದವರೆ, 'ಏನೋ ಕೃಷ್ಣಾ ನಾನಲ್ಲ ದೇಶ ಪಾಂಡೆಕೃಷ್ಣ, ಈ ಹಾಡು ಎಲ್ಲಿಂದ ತಂದ? ಯಾರು ರಚಿಸಿದವರು?' ಎಂದು ಗುಡುಗಿಬಿಟ್ಟರು ನನ್ನ ಕಾಲ ಕೆಳಗಿನ ನೆಲವೇ ಇಲ್ಲದ ಹಾಗಾಯಿತು. ಮೈ ಬೆವರಿತು ತಪ್ಪಿತಸ್ಥನ ಹಾಗೆ ನನ್ನ ಎದೆ ಡವಡವ ಬಡಿದುಕೊಳ್ಳುತ್ತಿತ್ತು. ಇನ್ನೇನು ಕಣ್ಣುಗಳಲ್ಲಿ ಆ ಮರ್ಯಾದಾಶ್ರುಗಳು ಹೊರಬೀಳುವುದರಲ್ಲಿದ್ದವು. ಅಷ್ಟರಲ್ಲಿ ದೇಶಪಾಂಡೆಕೃಷ್ಣ (ಈಗ ಕೃಷ್ಣರಾಯರು) 'ನಿಮ್ಮ ಕೃಷ್ಣನೇ ಇದನ್ನು ಬರೆದುಕೊಟ್ಟಿದ್ದಾನೆ, ಹಾಡಿದೆವು' ಎಂದ. 'ಬಂತಪ್ಪಾ ಏನೋ ಅವಮಾನ ಕಾಲ!' ಎಂದುಕೊಂಡು ಅತ್ಯಂತ ಖಿನ್ನನಾಗಿ ಕುಳಿತಿದ್ದೆ. ನಾನು ಹೈಸ್ಕೂಲಿನಲ್ಲಿ ಓದುತ್ತಿದ್ದೇನೆಂಬ ಅಭಿಮಾನದಿಂದಲೋ ಏನೋ ಅವರು ಹೆಚ್ಚಿಗೇನನ್ನೂ ನುಡಿಯಲಿಲ್ಲ. 'ಪದ್ಯಗಳನ್ನೂ ಪ್ರಾಸಬದ್ಧವಾಗಿ ರಚಿಸಬೇಕು. ಪ್ರಾಸರಹಿತ ಪದ್ಯ ಅದೇನು ಪದ್ಯ?' ಎಂದಿಷ್ಟೇ ನುಡಿದು ಹೊರಟುಹೋದರು. ಮೋಡ ಗುಡುಗಿದರೂ ಸಿಡಿಲು ಬರಗಲಿಲ್ಲ. ಸಾಕು, 'ಬದುಕಿಕೊಂಡೆ' ಎಂದುಕೊಂಡು ಆಗೇನೋ ಸುಮ್ಮನಾದೆ. ಆದರೆ ಮನಸ್ಸು ಮಾತ್ರ ವ್ಯಾಕುಲವಾಯಿತು. ನನ್ನ ಮಿತ್ರರ ಮುಂದೆ ನನಗಾದ ಅವಮಾನ ಸಹಿಸಲಸಾಧ್ಯವಾಯಿತು. ರಾತ್ರಿಯ ಊಟ ರುಚಿಸಲಿಲ್ಲ. ಹಾಸಿಗೆಯ ಮೇಲೆ ಮಲಗುವ ಶಾಸ್ತ್ರವೇನೋ ಮಾಡಿದೆ, ನಿದ್ರೆ ಬರಲಿಲ್ಲ. ಪ್ರಾಸಬದ್ಧವಾದ ಕವಿತೆಯನ್ನು ರಚಿಸಿ ನಮ್ಮ ದೊಡ್ಡಪ್ಪನವರಿಂದ ಮನ್ನಣೆ ಪಡೆದರೇನೇ ಅವರ ಮನೆತನದಲ್ಲಿ ಹುಟ್ಟಿದುದಕ್ಕೂ ಸಾರ್ಥಕ ಎಂದುಕೊಂಡು ಮರುದಿವಸವೇ 'ಕಲಿಯುಗದ ಜನರು' ಎಂಬ ಚಿಕ್ಕ ಷಟ್ಪದಿಕಾವ್ಯವೊಂದನ್ನು ಬರೆದು ತೋರಿಸಿದೆ. ಓದಿನೋಡಿ 'ಪರವಾಯಿಲ್ಲ, ಪ್ರಾಸ ಸರಿಯಾಗಿದೆ. ಇನ್ನೂ ಭಾವ ಹೊರಹೊಮ್ಮಬೇಕು, ಅಲಂಕಾರದ ಬೆಡಗೂ ಕಂಗೊಳಿಸಬೇಕು' ಎಂದು ನುಡಿದು ಛಂದಸ್ಸಿನ ಬಗೆಗೂ, ಅಲಂಕಾರದ ಬಗೆಗೂ ಏನೇನೋ ಉಪನ್ಯಾಸವಿತ್ತರು. ನನಗದು ಅರ್ಥವಾಗಲಿಲ್ಲ; ಆದರೂ ಬರೆಯುವುದು ಮಾತ್ರ ಬಿಡಲಿಲ್ಲ.

ಇನ್ನೊಂದು ಸಲವೂ ಹೀಗೆಯೇ ಆಯಿತು. ನಾನು ನನ್ನ ನೋಟ್ ಬುಕ್ಕಿನಲ್ಲಿ ಕೆಲವು ಪದ್ಯಗಳನ್ನು ಬರೆದು ಇಟ್ಟಿದ್ದೆ. ನಾನು ಇಂಥಾ ಕಾಗದ ಪತ್ರಗಳನ್ನು ಹಿರಿಯರಿಗೆ ಕಾಣದ ಹಾಗೆ ಇಡುತ್ತಿದ್ದೆ. ಆದರೆ ಅಂದೇಕೋ ಮರೆವಾಗಿತ್ತು. ಪಡಸಾಲೆಯಲ್ಲಿಯ ಒಂದು ಮಾಡದಲ್ಲಿ ನನ್ನ ಕಾವ್ಯ ಕಾಮಿನಿ ನನ್ನ ಯೋಗ ಈ ವೃತ್ತಿಯನ್ನು ಆರಿಸಿದ್ದು. ಇದರಿಂದ ಇಹ ಪರಗಳೆರಡೂ ಸಾಧಿಸಬಹುದೆಂದೂ, ನನ್ನ ವ್ಯಾಸಂಗಕ್ಕೂ, ಸಾಹಿತ್ಯ ಸೇವೆಗೂ ಇದರಿಂದ ಅನುಕೂಲವಾಗಬಹುದೆಂದೂ, ನಾನು ಎಣಿಸಿದ್ದು ಸರಿಯಾದುದೆಂದೇ ತಿಳಿದಿದ್ದೇನೆ. ಏಕೆಂದರೆ ನಾನಿಂದು ಈ ಸ್ಥಿತಿಗೆ ತಲುಪಿದುದು ಈ ವೃತ್ತಿಯ ಮೂಲಕವಾಗಿಯೇ. (ನಮ್ಮ ತಂದೆಯವರು ಈಗ ಇದ್ದಿದ್ದರೆ ಎಷ್ಟು ಹರ್ಷಪಡುತ್ತಿದ್ದರೊ!)

ನಾನು ಕಾವ್ಯಕನ್ನಿಕೆಯನ್ನು ಮೆಚ್ಚಲು ನನ್ನ ತಾಯಿ ವಿಯೋಗವೂ ಒಂದು ಮುಖ್ಯ ಕಾರಣವಾಯಿತೋ ಏನೋ! ಇನ್ನೂ ನಾನು ಹತ್ತನೆಯ ವರ್ಷದಲ್ಲಿ ಕಾಲಿಡುತ್ತಿರುವಾಗಲೆ ನಮ್ಮ ತಾಯಿ (ಅವಳು ಪ್ರೇಮ, ಅಂತಃಕರಣ, ಮತ್ತು ಸೌಜನ್ಯದ ಸಾಕಾರ ಮೂರ್ತಿ) ನಮ್ಮನ್ನಗಲಿ ಹೋದಳು. ಅಂಥ ಹೆತ್ತ ತಾಯಿಯನ್ನು ಕಳೆದುಕೊಂಡ ನನಗೆ ಒಂದು

ಣ್ಣು ಹೃದಯದ ಕೋಮಲ ಸಾಂತ್ವನದ ಅವಶ್ಯಕತೆ ನಿಸುತ್ತಿತ್ತು. ಪ್ರತ್ಯಕ್ಷವಾಗಿ ಅಂಥ ಸಾಂತ್ವನ ಯಾರಿಂದಲೂ ಕ್ಕುವುದು ಸಾಧ್ಯವಿಲ್ಲವೆನಿಸಿದಾಗ ತಾಯಿ ಶಾರದೆಯಲ್ಲಿ ಾರೆ ಹೋದೆ. ಅವಳು [ಳೇ] ನನ್ನನ್ನು ಕಾವ್ಯಶ್ರೀಯ ೀಹದಲ್ಲಿರಿಸಿ ತನ್ನ ಸೊಬಗನ್ನು ಅವಳಿಗೆ ಕೊಟ್ಟು ಅವಳ ಾಬಗನ್ನು ತಾನು ತೊಟ್ಟು, ನನ್ನ ಜೀವನಕ್ಕೊಂದು ಮೆರಗು ಾಟ್ಟಳು.

ನಾನು ಕವಿತೆಗಳನ್ನು ಬರೆಯಲು ಆರಂಭಿಸಿದ ಕಾಲ ಂದಲೂ "ಕನ್ನಡ ನುಡಿ" ಸಾಹಿತ್ಯ ಪರಿಷತ್ತಿನ ಮುಖ ಪತ್ರ ಷ್ಟೇ ಅಲ್ಲ. ನಾಡಿನ ಮುಖ್ಯ ಪತ್ರಿಕೆಯೂ ಹೌದು. ಅದರಲ್ಲಿ ಳ್ಳೊಳ್ಳೆಯ ವಿದ್ವಾಂಸರ ಬರಹಗಳೇ ಬರುತ್ತಿದ್ದವು. ಮೊದ ಮೊದಲು ಶ್ರೀಕಂಠಯ್ಯನವರಾರೋ, ಮಾಸ್ತಿಯವರಾರೊ ? .ವಿ.ಜಿ.ಯವರಾರೊ ? ಎಂಬುದು ಸ್ಪಷ್ಟವಾಗಿ ಗೊತ್ತಿರಲಿಲ್ಲ. ೇಂಪ್ರೆಯವರ "ಪಾತರಗಿತ್ತೀ ಪಕ್ಕಾ"ಎಂಬ ಪದ್ಯವನ್ನೋದಿ, ಇದರಲ್ಲೇನಿದೆಯಕ್ಕಾ' ಎಂದು ಗೇಲಿಮಾಡಿದ್ದೆ. ಆದರೆ ಯಸ್ಸು ಬಂದಹಾಗೆಲ್ಲ ಅಭ್ಯಾಸ ಬಲದಿಂದ ಆಧುನಿಕ ಸಾಹಿತಿ ರ ಸಾಹಿತ್ಯದಲ್ಲೂ ಹುರುಳಿದುದನ್ನು ಮನನಮಾಡಿಕೊಂಡೆ. ಾನು ಕನ್ನಡ ನುಡಿಯಲ್ಲಿ ಓದುತ್ತಿದ್ದುದು ಇಂಥ ಉದ್ದಾಮ ಾಹಿತಿಗಳ ಲೇಖನಗಳನ್ನೇ. ನನ್ನಂಥ ಎಳೆಯ ಸಹಧರ್ಮೀ ಯರ ಲೇಖನವೊಂದನ್ನೂ ನಾನು ಅದರಲ್ಲಿ ಕಾಣುತ್ತಿರಲಿಲ್ಲ. ನಗೆ ಮೊದಮೊದಲು ಧೈರ್ಯ ಬರಲಿಲ್ಲ. ಏಕೆಂದರೆ, ಶಿಕ್ಷಣದ ಲ್ಲ ಕ್ಷೇತ್ರಗಳಲ್ಲಿಯಂತೆ ಸಾಹಿತ್ಯ ಕ್ಷೇತ್ರದಲ್ಲಿಯೂ ನಾವು ಹೈದರಾಬಾದು ಕರ್ನಾಟಕದವರು) ಹಿಂದುಳಿದವರು, (ಹಿಂದು ದ ಜನಾಂಗದವರ ಹಾಗೆ ಎಂದು ಉಳಿದ ಭಾಗದವರು ಳಿದುಕೊಂಡಿದ್ದರು). ಆದರೂ ಧೈರ್ಯಮಾಡಿ 'ಏನೇ ಆಗಲಿ, ಡಿದರೆ ಜಟ್ಟಿ ಕಾಳಗವನ್ನೇ ಹಿಡಿಯೋಣ. ಬಡಪಾಯಿ ಕೊಡನೆ ಏನು ಮಲ್ಲಯುದ್ಧ ! ಎಂದುಕೊಂಡು, ನನ್ನ ಕನ್ನಡ ದೀಪವದೊ ಕಾಣುತಿಹುದು!' ಎಂಬ ಕವನವನ್ನು ನ್ನಡ ನುಡಿಗೇ ಕಳುಹಿಸಿದೆ. ಒಂದು ವಾರದ ನಂತರ ೊರಟ ಸಂಚಿಕೆಯಲ್ಲಿ ನನ್ನ ಆ ಕವನ ಮೇಲ್ಪಟ ಲ್ಲಿಯೇ ಅಚ್ಚಾಗಿತ್ತು. ನನಗಂದು ಹಬ್ಬ. ಹತ್ತಾರುಸಲ ಭಾಗವನ್ನಷ್ಟೆ ಓದಿದ್ದೇ ಓದಿದ್ದು, ಮಿತ್ರರಿಗೆ ತೋರಿಸಿದ್ದೇ ೋರಿಸಿದ್ದು. ಕೆಲವರಿಗೆ ಈ ನನ್ನ ಉತ್ಕರ್ಷ ಹಿಡಿಸದೇ ಹೋಗಿರಬಹುದು. ನಮ್ಮ ತಂದೆಯವರ ಕೈಯಲ್ಲಿ ಆ ಸಂಚಿಕೆ ಯನ್ನು ಇತ್ತಾಗ ಮಾತ್ರ ಅವರ ಹೃದಯ ತುಂಬಿಬಂತು. ನಂದಾಶ್ರುಗಳು ಪಳಪಳನೆ ಉದುರಿದವು. ಅವರ ಹೃದಯ ಲ್ಲಿ ಯಾವ ಯಾವ ಭಾವನೆಗಳು ಮೂಡಿದವೋ ಅವರಿಗೆ ಗೊತ್ತು, ನನಗೆ ಮಾತ್ರ ಅಂದು ಅವರು ಅನಂತ ಹಸ್ತಗಳಿಂದ ಹರಸುತ್ತಿರುವಂತೆ ಕಂಡಿತು. ಅದೇ ನನಗೆ ಕಾವ್ಯಲೋಕಕ್ಕೆ ನಿರಾತಂಕವಾಗಿ ಏರುವ ದಿವ್ಯ ಸೋಪಾನವಾಯಿತು. ಅಂದಿ ನಿಂದ ಇಂದಿನವರೆಗೂ ಏನೇನೋ ಬರೆದಿದ್ದೇನೆ. ಜಯಂತಿ, ಜೀವನ, ಅಮರವಾಣಿ ಮುಂತಾದ ಪತ್ರಿಕೆಗಳ ಸಂಪಾದಕರು ಅಂಥದನ್ನು ಮೆಚ್ಚಿ, ಅಚ್ಚುಹಾಕಿ, ಅಸಲೆ ಬತ್ತದಂತೆ ನೋಡಿ ಕೊಂಡಿದ್ದಾರೆ. ನನ್ನ ಸಹಧರ್ಮಿಣಿಯೂ, ಕಷ್ಟ-ಕಾರ್ಪಣ್ಯ ಗಳ ಕಾರ್ಮೋಡಗಳುದ್ಭವಿಸಿ, ಗುಡುಗಿ, ಮಿಂಚಿ ಅಬ್ಬರಿಸಿದಾ ಗಲೂ ನನಗಾ ಕಾವು ತಗಲದಂತೆ ನೋಡಿಯೂ, ತಗಲಿದಾಗ ಧೈರ್ಯ ಹೇಳಿಯೂ, ನನ್ನ ಕಾವ್ಯಸ್ರೋತ್ರ ಅವ್ಯಾಹತವಾಗಿ ಹರಿದುಕೊಂಡು ಬರುವಂತೆ ದಾರಿಮಾಡಿ ಕೊಟ್ಟಿದ್ದಾಳೆ. ನನ್ನ ಮಕ್ಕಳ ಗುಂಪೂ ಸಹಾ ನಗುಮೊಗವನ್ನು ಸೂಸಿ, ನಿತ್ಯವೂ ನೂತನ ಉತ್ಸಾಹವನ್ನು ಚೈತನ್ಯವನ್ನು ಒದಗಿಸಿದೆ, ಬರೆದು ದೆಲ್ಲವನ್ನೂ ರಸಿಕರ ಮುಂದಿರಿಸಿದ್ದೇನೆ. ಅದು ರಸಯುಕ್ತವೋ, ರಸಹೀನವೋ ಅವರೇ ನಿರ್ಧರಿಸಬೇಕು. 'ನನ್ನ ಕೃತಿರತ್ನವನ್ನು ಪರೀಕ್ಷಿಸುವವನಿಗೆ ಎಂಟೆದೆಯೆ ?, ಎಂದು ಕೇಳುವ ಬಂಟ ಮಾತ್ರ ನಾನಲ್ಲ.

ಒಂದು 'ಆದರ್ಶ ಸಮಾಜ' ವನ್ನು ಕಟ್ಟಬೇಕೆಂಬ ಹಂಬಲವುಳ್ಳವರಲ್ಲಿ ನಾನೂ ಒಬ್ಬ. ನಾನು ಸಾಧ್ಯವಾದಾಗಲೆಲ್ಲ ಅಂಥ ಸಮಾಜದ ರಚನೆಗಾಗಿ ವಿವಿಧ ರೂಪರೇಷೆಗಳನ್ನು ಹಾಕುತ್ತಿರುತ್ತೇನೆ. ಆದರೆ ಸಮಾಜವು ಈಗ ತುಳಿಯುತ್ತಿರುವ ದಾರಿಯನ್ನು ಕಂಡು ಅಪ್ರತಿಭನೂ, ಉದಾಸೀನನೂ ಆಗು ತ್ತೇನೆ. 'ನನ್ನ ಆದರ್ಶಗಳು ಈ ಭೂಮಿಗಿಳಿಯಲಾರವು' ಎಂಬ ಸಂದೇಹ ಒದಗಿದಾಗ ಕಲ್ಪನಾಲೋಕದ ನನ್ನ ಆದರ್ಶ ಗಳು ಕಥೆಗಳ ರೂಪದಲ್ಲಿ ಮೈವೆತ್ತುತ್ತವೆ. ಅಂಥ ಆದರ್ಶಗಳ ಒಂದು ಚಿಗುರೆಲೆಯೇ (ಸಂಗಮವೇ) ನನ್ನ 'ಆದರ್ಶ' ಕಥಾ ಸಂಕಲನ. ಇದೇರೀತಿ ಕೆಲ ಪ್ರಬಂಧಗಳನ್ನೂ, ಲೇಖನಗಳನ್ನೂ ಬರೆದಿದ್ದೇನೆ. ಒಂದು ಕಾದಂಬರಿಯೂ ಪ್ರೇಮದ ಮಬ್ಬು ಕವಿದವರಿಗೆ ಪ್ರೇಮದ ಹೆದ್ದಾರಿಯನ್ನೇ ಕ್ಷೇಮಕ್ಕಾಗಿ ಕಾದು ಕುಳಿತಿದ್ದಳು. ನಮ್ಮ ತಂದೆಯವರು ನಾನಿಲ್ಲದಾಗ ಅದನ್ನು ತೆಗೆದುಕೊಂಡು ಸಾದ್ಯಂತ ಓದಿದರು ಎಂಬ ಹಾಗೆ ಕಾಣು ತ್ತದೆ. ಅದರಲ್ಲಿಯ ಕೆಲ ಪದ್ಯಗಳು ಅವರ ಮನಸ್ಸನ್ನಾಕರ್ಷಿ ಸಿರಲೂ ಬಹುದು. ಆದರೆ ಹಳೆಯ ನಂಬುಗೆ (ಗಳ) ಯಲ್ಲಿ ಅವರಿಗೆ ವಿಶ್ವಾಸವಿದ್ದುದರಿಂದ ಕವಿತೆಗಳಲ್ಲಿ 'ವಿಷಾಕ್ಷರ' ಬೀಳು ವುದೆಂಬ ಭೀತಿ ಅವರ ಮನಸ್ಸಿನಲ್ಲಿ ನೆಲೆಯೂರಿತ್ತು. ಅದ ಕ್ಕಾಗಿಯೇ 'ನನ್ನ ಮಗನ ಈ ಹುಚ್ಚಿನಿಂದ ಮುಂದೇನಾದರೂ

ಅನಾಹುತ ಸಂಭವಿಸದಿರಲಿ !' ಎಂಬುದೇ ಅವರ ಕಕ್ಕುಲತೆಯ ಕರುಳಿನ ಒಳ ದನಿಯಾಗಿತ್ತು. ನಾನು ಮನೆಗೆ ಬಂದ ಕೂಡಲೆ 'ಕೃಷ್ಣಾ! ನಾನೆಷ್ಟು ಸಲ ನಿನಗೆ ಹೇಳಿದ್ದೇನೆ. ಕವಿತೆ ಕಟ್ಟಬೇಡ ಅಂತ, ಆದರೂ ನೀನು ಕೇಳಲೊಲ್ಲೆ. ನಿಲ್ಲು ನಿನ್ನನ್ನು ಥಳಿಸಿಯೇ ಬಿಡುತ್ತೇನೆ' ಎಂದವರೆ ಒಂದು ಕಟ್ಟಿಗೆ ತೆಗೆದುಕೊಂಡು ನನ್ನೆಡೆಗೆ ಧಾವಿಸಿದರು. ನನಗೆ ಭಯ ವಾಯಿತು. 'ತಂದೆ ಹೊಡೆಯ ಬೇಡ ! ಇನ್ನು ಮುಂದೆ ಮಾಡೆ ಕವಿತೆಯನ್ನು !!' ಎಂದು ಒಳಗೊಳಗೆಯೇ ಗುಣು ಗುಟ್ಟಿದೆ. ನಾನೇನೆನ್ನುತ್ತಿರುವೆನೆಂಬುದು ಅವರಿಗೆ ಸರಿಯಾಗಿ ಕೇಳಿಸದಿದ್ದರೂ, ಪದ್ಯದಲ್ಲಿಯೇ ಉತ್ತರ ಕೊಡುತ್ತಿದ್ದೇನೆಂಬು ದರ ಸರಿಯಾದ ಕಲ್ಪನೆಯಾಗಿ, ಮೇಲಕ್ಕೆತ್ತಿದ್ದ ಬಡಿಗೆಯನ್ನು ನಗುತ್ತಲೇ ಹಿಂತೆಗೆದುಕೊಂಡರು. ಇಲ್ಲಿಯೂ, ಬೀಸಿದ ದೊಣ್ಣೆಯು ತಪ್ಪಿತು; ಶತಾಯುಷ್ಯ ! ಎಂದುಕೊಂಡೆ. ಪುನಃ ಅವರು ಗಂಭೀರರಾಗಿ, ಪದ್ಯವನ್ನು 'ಕಟ್ಟಬೇಡೆಂದರೆ ಪದ್ಯ ದಲ್ಲಿಯೇ ಉತ್ತರ ಕೊಡುತ್ತಿರುವ ನಿನಗೆ ಏನು ಮಾಡಬೇಕು ! ಹಾಳಾಗು !' ಎಂದು ನುಡಿದು ಸುಮ್ಮನಾಗಿ ಬಿಟ್ಟರು. ನಾನೇನೋ ಹಿರಿಯರಮಾತು ಮೀರಬಾರದು, ಎಂದುಕೊಂಡು ಕೆಲವು ದಿವಸ ಪದ್ಯರಚನೆಯ ಗೊಡವೆಗೇ ಹೋಗಲಿಲ್ಲ. ಆದರೆ ಒಳದನಿಯೊಂದು ನನ್ನನ್ನು ಆಗಾಗ ಪ್ರಚೋದಿಸುತ್ತಿತ್ತು. ಸ್ಫೂರ್ತಿಯ ಸೆಲೆ ಒಡೆದು ಹೊರಸೂಸಿದಾಗ, ಪ್ರತಿಭೆ ಜಾಗ್ರತ ವಾದಾಗ ನನ್ನನ್ನು ನಾನೇ ಮರೆತು ಏನೇನೋ ಗೀಚಿಬಿಡು ತ್ತಿದ್ದೆ. ಎಚ್ಚರವಾದಾಗ ಅದೊಂದು ಕವಿತೆಯೇ ಆಗಿ ಬಿ[illegible] ರುತ್ತಿತ್ತು. ಹೀಗೆ ಕಾವ್ಯಕನ್ನಿಕೆ ತನ್ನ ನಯನ ಮನೋಹ[illegible] ಬೆಡಗು ಬಿನ್ನಾಣಗಳಿಂದ ಸುಳಿಯುತ್ತಿದ್ದಾಗ ಕಣ್ಣೆತ್ತಿನೋಡ[illegible] ರಸಿಕನಿರಬಹುದೆ. ನಾನಾರಿಗೂ ಸೋಲದಿದ್ದರೂ ಕಾ[illegible] ಕನ್ನಿಕೆಗೆ (ಗಾಗಿ) ಮಾತ್ರ ಆಗಾಗ ಮನಸೋತಿದ್ದೇನೆ. ಅ[illegible] ಳಿತ್ತ ಮುತ್ತುಗಳಿಂದ ಭಾವಸ್ಫುರಣ ಹೊಂದಿದ್ದೇನೆ. ಅಂ[illegible] ಕರಣ ಹೃದಯದಿಂದ ಅವಳು ಸುರಿಸಿದ ಆನಂದಾಶ್ರು 'ಅಮೃ[illegible] ಬಿಂದು' ವಾಗಿ ಪರಿಣಮಿಸಿದೆ. ಅದನ್ನು ನಾನು ಸವಿ[illegible] ಸುಖಿಸಿದ್ದೇನೆ. ಇತರರಿಗೂ ಸವಿಯಲು ಇತ್ತಿದ್ದೇನೆ.

ನಾನು ಮೆಟ್ರಿಕ್ ಪಾಸಾದ ನಂತರ ಕಡು ಬಡತನ[illegible] ಮೂಲಕ ಕಾಲೇಜಿನ ಅಭ್ಯಾಸಕ್ಕೆ ಶರಣು ಹೊಡೆದು ಮನಸ[illegible] ಲ್ಲದ ಬೇರೆ ಬೇರೆ ವೃತ್ತಿಗಳ ರುಚಿ ನೋಡಿ, ಕೊನೆಗೆ ಶಿಕ್ಷ[illegible] ವೃತ್ತಿಯಲ್ಲಿ ಸೇರಿದೆ. ಈ ವೃತ್ತಿ ನನಗೆ ಒಗ್ಗುವ ವೃತ್ತಿಯೆ[illegible] ಆಗಿತ್ತು. ಅಂತೆಯೇ ಸ್ವಯಂಸ್ಫೂರ್ತಿಯಿಂದ ತೋರಲು ಸಿ[illegible] ವಾಗಿದೆ. 'ಮಹಾ ಕವಿ' ಎಂಬ ಹಿಂದೂಸ್ಥಾನೀ ನಾಟಕವ[illegible] ಚಲಚ್ಚಿತ್ರ ನಿರ್ಮಾಪಕರಿಗೊಂದು ಆಹ್ವಾನದಂತಿದೆ. 'ಜೀವ[illegible] ಸಂಸಾರ'ವಂತೂ ಜನಮನದ ಸಂಸ್ಕಾರಕ್ಕಾಗಿಯೇ ಜನ್ಮವೆತ್ತಿ[illegible] ಇದೇ ರೀತಿ ಇನ್ನೂ ಬಹುಭಾಗ ಬರೆದಿದ್ದೇನೆ. ಬರೆಯುತ್ತಲ[illegible] ಇದ್ದೇನೆ.

—ಸಕೇ[illegible]

---

### ಕನ್ನಡ ಕವಿಗಳ ವಚೋವಿಲಾಸ

## ಬೇಂದ್ರೆ

ಬಿತ್ತಿದರು ಕಾಳು ಹನಿಹನಿಯಾಗಿ
ಬರ್ತಾಳ ತಾಯಿ ತೆನೆತೆನೆಯಾಗಿ

* * * * *

ಅಶೋಕ ವೃಕ್ಷದ ನೆರಳಿನಲಿ
ಸಶೋಕ ಸೀತೆಯ ಕಂಡಿದ್ದೆ
ಅಶೋಕ ಚಕ್ರದ ಧ್ವಜದಡಿಗೆ
ಸಶೋಕ ಜನತೆಯ ಕಾಣುತಿಹೆ

* * * * *

ಅರ್ಪಣವಿಲ್ಲದೆ ಪ್ರಸಾದವಿಲ್ಲ.
ರಸವೆ ಜನನ, ವಿರಸ ಮರಣ,
ಸಮರಸವೇ ಜೀವನ

## ಕುವೆಂಪು

ಆನಂದಮಯ ಈ ಜಗಹೃದಯ
ಏತಕೆ ಭಯ ಮಾಣೋ
ಸೂರ್ಯೋದಯ ಚಂದ್ರೋದಯ
ದೇವರ ದಯ ಕಾಣೊ

* * * * *

ಮೆಚ್ಚುಗೆಯೆ ನನಗೆ ಕೂಲಿ
ಬದುಕವುದೆ ನನಗೆ ಬೆಲೆ
ಸಾಧನೆಯ ಛಾಯೆ ಕಲೆ
ವಿಶ್ವಾತ್ಮನದಕೆ ನೆಲೆ
ನಿನಗದು ಚಮತ್ಕಾರ
ನನಗೂ ಸಾಕ್ಷಾತ್ಕಾರ




ಓಂ

ಶ್ರೀ ಪರಮಾತ್ಮನೇ ನಮಃ

# ಗೀತಾಯೋಗ

## ಕನ್ನಡ ಭಗವದ್ಗೀತೆ

### ಪೀಠಿಕೆ

ಈಶಪುತ್ರನನ್ನು ನಮಿಸಿ ಶಾರದೆಯನು ಮನದಿ ಸ್ಮರಿಸಿ
ನಾಶರಹಿತನಾದ ಅಜನ ಬಿಡದೆ ವಂದಿಸಿ ।
ಈಶ ಸೃಷ್ಟಿಯಲ್ಲಿ ಸ್ವಲ್ಪನಾಗಿ ಜ್ಞಾನದಿಚ್ಛೆಯಿಂದ
ಆಶೆರಹಿತ ಜ್ಞಾನಿಗುರುವ ಸದಾ ಭಜಿಸುತ ॥೧॥

ಸ್ವಾಮಿ ಕೃಷ್ಣಚಂದ್ರಮೂರ್ತಿ ಪಾರ್ಥಗೊರೆದ ತತ್ವಸಾರ
ಪ್ರೇಮದಿಂದೆ ಬರೆವೆನು ಶ್ರೀಕೃಷ್ಣಗೀತವ ।
ನೇಮದಿಂದ ಗೀತವಿದನು ಪೇಳಿದರಿಗೆ ಕೇಳಿದರಿಗೆ
ಶ್ರೀಮಹಾಸುಸಿದ್ಧಿಯವುದು ಸಿರಿಯು ಬರುವುದು ॥೨॥

ಕವಿಯ ಕೀರ್ತಿಬಯಕೆಯಿಲ್ಲ ಕವಿಯುಗಣಕೆ ಕೊರತೆಯಿಲ್ಲ
ಕವೀಂದ್ರ ವ್ಯಾಸ ವಾಲ್ಮೀಕಿಗೆದುರು ಇರುವರೆ ।
ಕವಿವರೇಣ್ಯರೆನಿಬರುಂಟು ದೇವದೇಶ ಭಾಷೆಯಲ್ಲಿ
ಅವರಿಗೆಲ್ಲ ವಿನಯದಿಂದ ತಲೆಯ ಬಾಗಿಪೆ ॥೩॥

ಅಂತರಾತ್ಮ ಪ್ರೇರಿಸಿದನು ನಾಡ ಜಾನಪದಕೆ ಬರೆಯೆ
ಎಂತಲೇ ಬರೆವೆನಿದನು ಅವರಿಗಾಗಿಯೆ ।
ಇಂತು ಇದನು ಹಾಡಿ ಪೇಳೆ ಮನೆಯ ಪೆಣ್ಣು ಜನಕೆ ಒಪ್ಪು
ಎಂತಲೇ ಬರೆವೆನಿದನು ಪೆಣ್ಣಿಗಾಗಿಯು ॥೪॥

ನೀರಕ್ಷೀರ ನ್ಯಾಯದಂತೆ ಎಲ್ಲ ಓದುವವರು ಇದರ
ಸಾರವನ್ನೆ ಕೊಂಡು ಬಾಳ ಬೆಳಕು ಗೆಯ್ವುದು ।
ನೀರಕೊಂಡು ಕೋರೆಗೈವ ಜನಕೆ ಮರುಗದನ್ಯವಿಲ್ಲ
ಸರ್ವರಕ್ಷ ಸಕಲರನ್ನು ಪಾರುಗೈಯಲಿ ॥೫॥

ಕರ್ತೃಭಾವವಿದರೊಳಿಲ್ಲ ಇದಕೆ ಕರ್ತೃವಿಲ್ಲದಿಲ್ಲ
ಕರ್ತೃವಮೃತನವನ ಸೇವಿ ಚನ್ನಶಾಮನು ।
ಮರ್ತ್ಯರಲ್ಲಿ ಒಬ್ಬನೆನಿಸಿ ಅಮೃತಪುರಿಯ ನೆನಿಪನಹಂ
ಕರ್ತೃಭಾವೆವಿಲ್ಲದಮೃತ ಚನ್ನಶಾಮನು ॥೬॥

ಎಲ್ಲ ಉಪನಿಷತ್ತ ಕೂಡಿ ಹಸನನಾದ ಹಸುವ ಮಾಡಿ
ಫುಲ್ಲನಯನ ಗೊಲ್ಲಕೃಷ್ಣ ಹಾಲ ಕರೆಯಲು
ಅಲ್ಲಿ ಪಾರ್ಥ ಕರುವೆ ಆಗಿ ಸೊದೆಯ ಪಾಲ ಪೀರಲಾಗ
ಸಲ್ಲಲಿತದ ಗೀತೆಯಮೃತ ಧರೆಯೊಳುದಿಸಿತು ॥೭॥

ಒಂದೆ ಶಾಸ್ತ್ರವದುವೆ ಗೀತವೊಬ್ಬದೇವನವನೆ ಯೋಗಿ
ಯಿಂದು ದೇವಕೀಯ ಪ್ರೀಯ ತನಯ ಕೃಷ್ಣನು ।
ಒಂದೆ ಮಂತ್ರವಾವುದೆಂದರವನ ನಾಮಧ್ಯಾನ ಪಠನ
ವೊಂದೆ ಕರ್ಮವದುವೆ ದೇವನವನ ಸೇವೆಯು ॥೮॥

ಗೀತೆಯೂ ಸುಗೀತವದುವು ಕರ್ತವ್ಯವಾಗಿ ಇಹುದು
ಗೀತೆಗಿಂತಲೇನು ಅನ್ಯಶಾಸ್ತ್ರವಿಸ್ತರ ।
ಖ್ಯಾತಿ ಪಡೆದ ಗೀತೆಯಿದುವು ಸ್ವಯಂ ಪದ್ಮನಾಭನದುವೆ
ಪೂತವದನ ಪದ್ಮದಿಂದಲೇ ವಿನಿಃಸೃತ ॥೯॥

ಗೀತೆಯಿದುವು ಭಾರತದಾ ಅಮೃತ ಸರ್ವವಾಗಿ ಇಹುದು
ಗೀತೆ ವಿಷ್ಣುವಕ್ತ್ರದಿಂದಲೇ ವಿನಿಃಸೃತ ।
ಗೀತೆ ಗಂಗೆಯುದಕವನ್ನು ಕುಡಿದ ಮೇಲೆ ಇನ್ನು ತಾನು
ಭೀತಿಪಡಿಪ ಪುನರ್ಜನ್ಮ ವಿರುವುದಿಲ್ಲವು ॥೧೦॥

ಭವೆ ಮೂಕನನ್ನೂ ವಾಚಾಲನಾಗಿ ಮಾಳ್ಪುದದುವು
ಜವದೆ ಪಂಗು ಗಿರಿಯ ಲಂಘಿಪಂತೆ ಮಾಳ್ಪುದು ।
ಭುವನದಲ್ಲಿ ಯಾರ ಕೃಪೆಯು ಅವನು ನಾನು ಬಿಡದೆ ವಂದಿ
ಸುವೆನು ಪರಮ ಆನಂದ ಮಾಧವನನು ॥೧೧॥

ಓಂ ತತ್‌ಸತ್

## ಅಧ್ಯಾಯ ಒಂದು

### ಅರ್ಜುನ ವಿಷಾದ ಯೋಗ

ಧರ್ಮಕ್ಷೇತ್ರ ಕುರುಕ್ಷೇತ್ರದೊಳಗೆ ಯುದ್ಧದಿಚ್ಛೆಯಿಂದ
ಕರ್ಮಪ್ರಾಪ್ತಿಯಿಂದ ನೆರೆದ ನಮ್ಮ ಜನಗಳು ।
ಧರ್ಮರಾಯನಾದಿ ಪಾಂಡು ಪುತ್ರರವರ ಜನರು ಸಹಿತ
ಕರ್ಮವೇನ ಗೈದರದನು ಪೇಳು ಸಂಜಯ ||೧||

ದೂತ ಸಂಜಯನು ಆಗ ನುಡಿದನು ಧೃತರಾಷ್ಟ್ರನಿಂಗೆ
ಪೂತ ಆರ್ಯ ! ನಿನ್ನ ಮಗನು ಆ ದುರ್ಯೋಧನ ।
ಖ್ಯಾತ ಪಾಂಡು ಪುತ್ರ ಸೈನ್ಯ ನೋಡಿ ದ್ರೋಣರೆಡೆಗೆ ನಡೆದು
ಮಾತನಿಂತು ನುಡಿದ ರಾಯ ವಿನಯದಿಂದಲಿ ||೨||

ಗುರುವೆ ಪಾಂಡುಪುತ್ರರಿವರ ದೊಡ್ಡ ಸೈನ್ಯವನ್ನು ನೋಡಿ
ಅರಿತ ದ್ರುಪದ ಪುತ್ರ ನಿಮ್ಮ ಶಿಷ್ಯ ನಾಯಕ ।
ನೆರೆದು ಶೂರರಿರುವರಿಲ್ಲಿ ಭೀಮ ಪಾರ್ಥಸಮರ ಸಮರು
ವಿರಾಟ ಯುಯುಧಾನ ಮಹಾರಥಿಯು ದ್ರುಪದನು ||೩||

ವೀರ್ಯವಂತ ಕಾಶಿರಾಜ ದೃಷ್ಟಕೇತು ಚೇಕಿತಾನ
ನರಶ್ರೇಷ್ಠ ಶೈಬ್ಯ ಕುಂತಿಭೋಜ ಪುರುಜಿತು ।
ವೀರ್ಯವಂತ ಉತ್ತಮೌಜ ಯುಧಾಮನ್ಯು ವಿಕ್ರಾಂತ
ವೀರರಥರೆ ಸುಸೌಭದ್ರ ದ್ರೌಪದೇಯರು ||೪||

ದ್ವಿಜೋತ್ತಮರೆ ಚಿತ್ತವಿಡಿರಿ ನಮ್ಮ ಕಡೆಯ ಗಣ್ಯರನ್ನು
ಅಜೇಯ ಸೈನ್ಯನಾಯಕರ ಪೆಸರ ಪೇಳುವೆ ।
ದ್ವಿಜಶ್ರೇಷ್ಠ ತಾವು ಮತ್ತೆ ತಾತ ಭೀಷ್ಮ ಕರ್ಣ ಕೃಪರು
ನಿಜೈಕಸುತ ವಿಕರ್ಣ ಸೌಮದತ್ತಿಯೆಂಬರು ||೫||

ಅನ್ಯರಾದ ಮತ್ತೆ ಬಹಳ ಶೂರರೆಲ್ಲ ಎನಗೆ ಆಗಿ
ಮಾನ್ಯ ಯುದ್ಧದಲ್ಲಿ ಪ್ರಾಣ ಬಿಡಲು ಸಿದ್ಧರು ।
ಅನ್ಯರಾದರಿವರನೇಕ ಶಸ್ತ್ರಯುಕ್ತರಾಗಿ ಎಲ್ಲ
ಮಾನ್ಯಯುದ್ಧ ವಿಶಾರದರೆ ಎನಿಸಿ ಇರುವರೊ ||೬||

ಅಪರ್ಯಾಪ್ತವೆನಿಪುದೆಮ್ಮ ಭೀಷ್ಮರಕ್ಷೆಯಿರುವ ಬಲವು
ಸಪರ್ಯಾಪ್ತವವರ ಬಲವು ಭೀಮರಕ್ಷಿತ ।
ಅಪರಿಮಿತವ ವೀರರೆಲ್ಲ ತಮ್ಮ ಸ್ಥಾನಗಳಲಿ ನಿಂತು
ಸುಪರಿರೀತಿ ಎಲ್ಲ ಭೀಷ್ಮರನ್ನೆ ರಕ್ಷಿಸಿ ||೭||

ಗೆಲವುಗೊಳಿಸಲಾತನನ್ನು ವೀರವೃದ್ಧ ಪಿತಾಮಹನು
ಬಲಿದು ಶಂಖವೂದಿ ಸಿಂಹನಾದಗೈದನು ।
ಬಳಿಕ ಶಂಖ ಭೇರಿಪಣವ ಗೋಮುಖಾನಕಾದಿ ವಾದ್ಯ
ವೊಳಗಿ ಶಬ್ದಗೈಯಲದುವೆ ಭಯವು ಎನಿಸಿತು ॥೮॥

ಆಗ ಶ್ವೇತಹಯವಗೊಂಡ ಶ್ರೇಷ್ಠರಥವನೇರಿಯಿದ್ದ
ರಾಗ ರಹಿತ ಸಹಿತ ಕೃಷ್ಣ ಪಾರ್ಥರಿಬ್ಬರು ।
ಬೇಗ ತಮ್ಮ ದಿವ್ಯವಾದ ಶಂಖಗಳನು ಪೂರಿಸಿದರು
ಆಗಲದುವೆ ಧ್ವನಿಯು ನಾಲ್ಕುದೆಸೆಯೊಳುದಿಸಿತು ॥೯॥

—ಅನ್ನುತ ಚನ್ನಶಾಮ

---




ಸಂಗೀತ ವಿದ್ವಾನ್ ಟಿ. ವಿ. ಮುತ್ತಾಚಾರ್ಯ,
ಬಿ.ಎ.(ಆನರ್ಸ್),ಬಿ.ಇಡಿ.

ಪುಣ್ಯಕ್ಷೇತ್ರಗಳು ಆಧುನಿಕ ಭಾರತವನ್ನು ಆಧ್ಯಾತ್ಮ ವಿಕಾಸ ಕಾರಕವಾದ ಶುದ್ಧ ಧರ್ಮ ಸಂಸ್ಕೃತ ಪೂರ್ಣ ಸನಾತನ ಭಾರತ ಮೊಡನೆ ಬೆಸೆದು ಬೆರೆಸುವ ದಿವ್ಯ ಸೇತುವೆಗಳೆನ್ನಬಹುದು. ಗುರುಕುಲ ವಿದ್ಯಾಭ್ಯಾಸ ತೀರ್ಥಯಾತ್ರೆ, ಪುಣ್ಯಕ್ಷೇತ್ರದರ್ಶನ, ದೇಶಸಂಚಾರಾದಿಗಳನ್ನು ಮಾಡದೆ ಪೂರ್ಣವಾಗುವಂತೆಯೇ ಇರಲಿಲ್ಲವೆಂಬುದು ಸರ್ವವಿದಿತ. 'Travelling is a Part of education' ಎಂದು "ಬೇಕನ್" (Bacan) ಮಹಾಶಯನು ಹೇಳಿರುವುದನ್ನು ಈ ಸಂದರ್ಭದಲ್ಲಿ ನೆನಪಿಗೆ ತಂದುಕೊಳ್ಳಬಹುದು. ಶ್ರೀ ಕೆ. ಎಂ. ಮುನಿಶಿಯವರ ಮಾತಿನಲ್ಲಿ ಹೇಳುವುದಾದರೆ,

"ಪುಣ್ಯಕ್ಷೇತ್ರಗಳ. ದರ್ಶನ ಮಾಡುವುದರಿಂದ ವ್ಯಕ್ತಿಗೆ ನಿತ್ಯದ ಬರಡು ಬೇಸರಿಕೆಯ ಜೀವನದಿಂದ ಒಂದಿನಿತು ಕಾಲ ವಿರಾಮ ದೊರೆಯುವುದೇ ಅಲ್ಲದೆ ಕನ್ನಡನಾಡಿನ ವೈಶಾಲ್ಯತೆಯೂ, ವೈವಿಧ್ಯವೂ ಅರಿವಿಗೆ ಬರುವಂತಹ ಒಂದು ಸದವಕಾಶ ಲಭ್ಯವಾಗುತ್ತದೆ. ಇದರ ಅಪ್ರತ್ಯಕ್ಷವಾದ ಒಂದು ಗಮನಾರ್ಹ ಪರಿಣಾಮವಾವುದೆಂದರೆ ಮತ ಸಹಿಷ್ಣುತಾಶಕ್ತಿ (Sprit of tolerance) ಮತ್ತು ಸಹೋದರ ಭಾವನೆ (feeling of brotherhood) ಐಕ್ಯತಾ ಭಾವ, ಸಾಮಾನ್ಯ ಸಂಸ್ಕೃತಿ (Common culture) ಇವೆಲ್ಲಾ ಯಾತ್ರಿಕನಲ್ಲಿ ಮನೆಮಾಡುವ ಗಮನೀಯ ಅನುಭವ ಸಂಪತ್ತು."

"ಪುಣ್ಯಕ್ಷೇತ್ರಗಳು ತಮ್ಮ ಮಹಾ ಪ್ರಭಾವದಿಂದ ಭವ್ಯ ಭಾರತದ ಧಾರ್ಮಿಕ ಮತ್ತು ಸಾಂಸ್ಕೃತಿಕ ಅಡಿಪಾಯಗಳನ್ನು ಭದ್ರಗೊಳಿಸಬಲ್ಲ ಪ್ರಬಲ ಕ್ರಾಂತಿಕಾರಕ ದಿವ್ಯ ಕೇಂದ್ರಗಳೆಂದರೆ ಅತಿಶಯೋಕ್ತಿಯಾಗಲಾರದು".

"ಪುರಾತನ ಭಾರತದ ವೈಭವೋಪೇತ ಕೀರ್ತಿಯನ್ನು ಮನದಟ್ಟು ಮಾಡಿಕೊಡುವುದರಲ್ಲಾಗಲಿ, ಮಾತೃಭೂಮಿಯ ಪಾವಿತ್ರ್ಯವನ್ನು ಒತ್ತಿ ಹೇಳುವುದರಲ್ಲಾಗಲಿ, ಬೆಳೆಯುವ ಬಾಲಕ ಬಾಲಕಿಯರಲ್ಲಿ ದೈವಭಕ್ತಿಯನ್ನು ಪ್ರಚೋದಿಸುವುದರಲ್ಲಾಗಲಿ ತೀರ್ಥಕ್ಷೇತ್ರಗಳ ಪಾತ್ರ ಬಹಳ ಹಿರಿದೆನ್ನಲು ಯಾವ ಅಡ್ಡಿಯೂ ಇಲ್ಲ."

"Hinduism through the ages" ಎಂಬ ಗ್ರಂಥದಲ್ಲಿ ಶ್ರೀ ಡಿ.ಎಸ್.ಶರ್ಮ ಅವರು ಹೀಗೆ ಹೇಳಿದ್ದಾರೆ.

"From time immemorial the feeling of unity is Hindu Society has been fostored by the common pilgrim centres scattered througout India, by the Periodical melas and jathras where thousands of people of all classes congregate and take part in a common ritual and by the annual round of festivals, processions and ceremonial parades connected with the great public temples especially of South India."

ಸಾಂಸ್ಕೃತಿಕವಾಗಿ ಮತ್ತು ಧಾರ್ಮಿಕವಾಗಿ ನಾಡಿನ ಜನಗಳು ಪರಸ್ಪರ ಬಂಧು ಮಧುರ ಬಾಂಧವ್ಯದ ಮೂಲಕ ಭಾವೈಕ್ಯತೆಯನ್ನು ಸಾಧಿಸಲು ಪುಣ್ಯಕ್ಷೇತ್ರಗಳು ಹೇಗೆ ನೆರವಾಗುತ್ತವೆಂಬುದನ್ನು ಮೇಲಿನ ಉಕ್ತಿಯಿಂದ ಮನಗಾಣಬಹುದು.

ಶ್ರೀ ಸಿದ್ಧಗಂಗಾ ಕ್ಷೇತ್ರವೂ ಮೇಲೆ ತಿಳಿಸಿರುವಂತೆ ವಿಶಿಷ್ಟ ಪುಣ್ಯಕ್ಷೇತ್ರಗಳ ಸಮಸ್ತ ಲಕ್ಷಣಗಳನ್ನು ಒಳಗೊಂಡಿರುವು

ದೆಂಬ ವಿಷಯ ಪ್ರತಿಯೊಬ್ಬ ಯಾತ್ರಿಕನಿಗೂ ಒಂದು ದೊಡ್ಡ ಹೆಮ್ಮೆಯ ಸಂಗತಿಯೇ ಸರಿ. ವಿದ್ಯಾದಾನ, ಅನ್ನದಾನ, ಜ್ಞಾನದಾನದ—ತ್ರಿವೇಣೀ ಸಂಗಮ ಮತ್ತೂ ಬಹು ಪ್ರಧಾನ ವಾದ ಲಕ್ಷಣವೆಂದೂ ಅದನ್ನು ಪ್ರತ್ಯಕ್ಷ ಸಂದರ್ಶಿಸಿದವರೆಲ್ಲಾ ಮನಗಾಣುವರು.

ನಾವು ನಮ್ಮ ಪ್ರಾಚೀನ ಭಾರತದ ಪ್ರಸಿದ್ಧ ವಿದ್ಯಾ ಪೀಠಗಳಾದ ನಳಂದ, ತಕ್ಷಶಿಲ ಮುಂತಾದುವುಗಳ ಹೆಸರನ್ನು ಹೇಳುತ್ತಿರುತ್ತೇವೆ. ಅವೆಲ್ಲ ಗತ ವೈಭವದ ಮಾತೆಂದು ಉದಾಸೀನರಾಗುತ್ತೇವೆ. ಅಂತಹ ಉದಾತ್ತ ವಿದ್ಯಾಪೀಠಗಳ ಕನಸನ್ನು ನನಸು ಮಾಡುವಂತಹ ಒಂದು ಮಹತ್ತರ ವಿದ್ಯಾ ಪೀಠವೆಲ್ಲಿಯಾದರೂ ಇರುವದೇ ಎಂದು ಪ್ರಶ್ನೆ ಮಾಡುವವರಿಗೆ ಸರಿಯಾದ ಉತ್ತರ ಶ್ರೀ ಸಿದ್ಧಗಂಗಾ ಮಠ. ವಿದ್ಯಾರ್ಥಿಗಳ ಸಂಖ್ಯೆಯಲ್ಲಾಗಲಿ, ವಿದ್ಯಾದಾನದ ಬೃಹತ್ತಿನಲ್ಲಾಗಲಿ, ಶಿಕ್ಷಕರ ಪ್ರತಿಭೆಯ ಶ್ರೇಷ್ಠತೆಯಲ್ಲಾಗಲಿ, ಗುರುಪೀಠದ ಮಹತ್ತಿನಲ್ಲಾ ಗಲಿ, ನಳಂದಾದಿ ವಿಶ್ವವಿದ್ಯಾನಿಲಯಗಳಿಗಿಂತ ಈ ಮಠವು ಎಳ್ಳಷ್ಟು ಕಡಿಮೆಯಾಗಿಲ್ಲವೆಂದು ಘಂಟಾಘೋಷವಾಗಿ ಹೇಳ ಬಹುದು. ಕ್ಷೇತ್ರಾಧ್ಯಕ್ಷರ ಪ್ರತಿಭೆ, ದಕ್ಷತೆ, ದೂರಾಲೋಚನೆ, ವಿದ್ಯಾ ಪಕ್ಷಪಾತತೆ, ಕೃಪಾಮಯತೆ, ಲೋಕಕಲ್ಯಾಣ ದೃಷ್ಟಿ ಮುಂತಾದ ಉದಾತ್ತ ಗುಣಗಳ ಪ್ರತಿ ಫಲವಾದ ವಿವಿಧ ವಿದ್ಯಾಪೀಠಗಳ ಅಸ್ತಿತ್ವದಿಂದ ಈ ಪುಣ್ಯ ಕ್ಷೇತ್ರಕ್ಕೆ ಒಂದು ವಿಶಿಷ್ಟ ಸ್ಥಾನವಿದೆ.

### "ಭರತ ಖಂಡದಲ್ಲಿಯೇ ದೊಡ್ಡ ಮಠ"

ಕನ್ನಡ ನಾಡಿನಲ್ಲಿ ಎಲ್ಲೆಡೆಯೂ ಮಠಗಳಿವೆ. ಆದರೆ ಮಠಗಳೆಂದರೇನು ? ಅವುಗಳ ಲಕ್ಷಣಗಳೆಂತಹವು ? ಆ ಮಠ ಗಳು ಮಾಡಬೇಕಾದ ಕರ್ತವ್ಯಗಳಾವುವು ?—ಈ ಪ್ರಶ್ನೆಗಳಿಗೆ ಎಷ್ಟು ಮಠಗಳು ದೃಢವಾದ ಉತ್ತರವನ್ನು ನೀಡಬಲ್ಲವು ? "ಮಠಶ್ಛಾತ್ರಾದಿ ನಿಲಯಃ" ಎಂಬ ಅಮರಕೋಶ ಶ್ಲೋಕದ ರೀತ್ಯ ಮಠಗಳೆಂದರೆ ವಿದ್ಯಾ ವ್ಯಾಸಂಗ ಮಾಡುವ ವಿದ್ಯಾರ್ಥಿ ಗಳ ನಿಲಯವೆಂದರ್ಥ. ಶ್ರೀ ಸಿದ್ಧಗಂಗಾ ಮಠವು ಇಡೀ ಕನ್ನಡ ನಾಡಿನಲ್ಲೇ ಏಕೆ? ಇಡೀ ಭರತ ಖಂಡದಲ್ಲಿಯೇ ಅತಿ ದೊಡ್ಡ ವಿದ್ಯಾರ್ಥಿನಿಲಯವೆಂದರೆ ಮಹದಾಶ್ಚರ್ಯ ವಿಷಯ ವಲ್ಲದೆ ಮತ್ತೇನು ! ಎರಡು ಸಾವಿರ ಜನ ವಿದ್ಯಾರ್ಥಿಗಳು ಒಂದು ಕಡೆ ಸೇರಿ ವಿವಿಧ ಭಾಗಗಳಲ್ಲಿ ವ್ಯಾಸಂಗ ಮಾಡುತ್ತಿ ರುವ ಮಠ ಎಲ್ಲಿದೆ ಎಂದು ಹುಡುಕೋಣ ?

### ದಕ್ಷಿಣ ಶಾಂತಿನಿಕೇತನ—ಶ್ರೀ ಸಿದ್ಧಗಂಗಾ ಕ್ಷೇತ್ರ

### ದಕ್ಷಿಣ ಭಾರತ—ಪುಣ್ಯಕ್ಷೇತ್ರ

"ಭರತ ಖಂಡದಲ್ಲಿ ಜಾಗೃತವಾಗಿ ಕೆಲಸ ಮಾಡುತ್ತಿ ರುವ ಮಹಾಭಾವನೆಗಳಿಗೆಲ್ಲಾ ಉಗಮಸ್ಥಾನವಾಗಿದೆ ದಕ್ಷಿಣ."

ಹೀಗೆಂದು ಸ್ವಾಮಿ ವಿವೇಕಾನಂದರು ಒಂದೆಡೆ ಹೇಳಿರು ವರು. ಧಾರ್ಮಿಕ ಪ್ರಪಂಚದ ಮಹಾಜ್ಯೋತಿಗಳಂತಿರುವ ಶಂಕರ, ರಾಮಾನುಜ, ಮಧ್ವಾಚಾರ್ಯ, ಬಸವೇಶ್ವರ ಮುಂತಾದವರೆಲ್ಲ ಭರತಖಂಡದ ದಕ್ಷಿಣ ದಿಗ್ಭಾಗದಲ್ಲೇ ಜನ್ಮ ತಾಳಿದವರೆಂದರೆ ನಮಗೆ ಒಂದು ಹೆಮ್ಮೆಯ ಮಾತು. ಅದ್ವೈತ ಮತಸ್ಥಾಪನಾಚಾರ್ಯರಾದ ಶ್ರೀ ಶಂಕರಾಚಾರ್ಯರು ಇಂದಿಗೂ ಪ್ರಪಂಚದ ಅದ್ವೈತಿಗಳೆಲ್ಲರ ಭಕ್ತಿ ಗೌರವಗಳಿಗೆ ಪಾತ್ರರಾಗಿರು ವರು. ಶ್ರೀ ರಾಮಾನುಜಾಚಾರ್ಯರ ದಿವ್ಯ ಪ್ರತಿಭೆಯಿಂದ ಅತಿ ದೀನನೆನಿಸಿದ್ದವನು ಆಳ್ವಾರರ ಸ್ಥಾನಕ್ಕೇರಿದನು. ಪ್ರಖ್ಯಾತ ಔತ್ತರೇಯರಾದ ಶ್ರೀ ಕೃಷ್ಣಚೈತನ್ಯರೂ ಸಹ ಶ್ರೀ ಮಧ್ವಾ ಚಾರ್ಯರ ತತ್ವ ಪ್ರತಿಪಾದನೆಗಳಿಂದ ಪ್ರಭಾವಿತರಾದರು.

"ದಯವೇ ಧರ್ಮದ ಮೂಲವಯ್ಯ. ಕಾಯಕವೇ ಕೈಲಾಸವಯ್ಯ. ಸಕಲ ಜೀವಾತ್ಮರಿಗೆ ಲೇಸನೆ ಬಯಸುವ ಶರಣರೆ ಕುಲಜರು" ಮುಂತಾಗಿ ಸಾರಿದ ಭಗವಾನ್ ಬಸವೇಶ್ವ ರರು ದೀನ ದಲಿತರ ಏಳ್ಗೆಗಾಗಿ ಮೇಲುಕೀಳುಗಳನ್ನು ನೀಗಿ ಮಾನವ ಸಮಾನತೆಗಾಗಿ ದುಡಿದು ವಿಶ್ವಮಾನ್ಯ ವ್ಯಕ್ತಿಯಾಗಿ ಭಕ್ತಿ ಭಂಡಾರಿಯಾಗಿ ಮೆರೆದು ಅಮರರಾದರು. ಭರತಖಂಡದ ಸನಾತನ ಧರ್ಮ ಸಂಸ್ಕೃತಿಗಳ ನಂದಾದೀಪ ಕಳೆಗುಂದದೆ ನಂದದೆ ಮತ್ತಷ್ಟು ತೇಜೋಭರಿತವಾಗಿ ಕಾಂತಿಯುಕ್ತವಾಗಿ ಬೆಳಗಿ ........... ಜನ ಇದರ ಬೆಳಕಿನಿಂದ ಜ್ಞಾನಮಾರ್ಗದಲ್ಲಿ ಸಾಗಿ ಗುರಿ ಸಾಧಿಸಲೆಂಬ ಮಹತ್ತರವಾದ ಉದ್ದೇಶದಿಂದ ಅಲ್ಲಲ್ಲಿ ಅನೇಕ ಮಹಾ ಪುರುಷರು ಹುಟ್ಟಿಕೊಂಡು ತಮ್ಮ ಕರ್ಮಯೋಗ ಮಹತ್ತಿನಿಂದ ಅನೇಕ ಮಹಾಕಾರ್ಯಗಳನ್ನು ಸಾಧಿಸಿದರು. ಇದರ ದಿವ್ಯ ಪರಿಣಾಮವೇ ಧರ್ಮ ಸಾಧನೆಯ ಕೀರ್ತಿ ಕಳಸಗಳಿಂದ ಪುಣ್ಯ ಕ್ಷೇತ್ರಗಳ ಉಗಮ. ಈ ಹಿನ್ನೆಲೆ ಯಿಂದ ವಿಮರ್ಶೆ ಮಾಡುವುದಾದರೆ ಶ್ರೀ ಸಿದ್ಧಗಂಗಾ ಕ್ಷೇತ್ರವು ಸಹ ದಕ್ಷಿಣಾಪಥದಲ್ಲಿ ಒಂದು ವಿಶಿಷ್ಟ ಗುಣಯುಕ್ತವಾದ ಮಹಾ ಪುಣ್ಯಕ್ಷೇತ್ರವೆಂದು ವ್ಯಕ್ತವಾಗದಿರದು.

## ಶ್ರೀ ಸಿದ್ಧಗಂಗಾ—ಕ್ಷೇತ್ರ ವಿಳಾಸ

ಶ್ರೀ ಸಿದ್ಧಗಂಗಾ ಕ್ಷೇತ್ರವು ಕನ್ನಡ ನಾಡಿನ ಸುಪ್ರಸಿದ್ಧ ಕ್ಷೇತ್ರಗಳಲ್ಲಿ ಒಂದು ವಿಶಿಷ್ಟತೆಯನ್ನು ಪಡೆದ ಮಠ. ತುಮಕೂರು ಜಿಲ್ಲೆಯಲ್ಲಿಯೇ ಏಕೆ, ಇಡೀ ಕನ್ನಡ ನಾಡಿನಲ್ಲೇ ಇದು ಬಹು ಮುಖ್ಯವಾದ ವಿದ್ಯಾಪೀಠ. ಬೆಂಗಳೂರು-ಹೊನ್ನಾವರ ಮಾರ್ಗದ ಹಾಗೂ ಬೆಂಗಳೂರು-ಪೂನಾ ರೈಲುಮಾರ್ಗದ ಮಧ್ಯದಲ್ಲಿ ತುಮಕೂರಿಗೆ ಪೂರ್ವದಲ್ಲಿ ಸುಮಾರು ಮೂರು ಮೈಲಿಗಳ ದೂರದಲ್ಲಿ ಕ್ಯಾತ್ಸಂದ್ರ ರೈಲು ನಿಲ್ದಾಣಕ್ಕೆ ಎರಡು ಫರ್ಲಾಂಗ್ ಅಂತರದಲ್ಲಿ ಈ ದೊಡ್ಡ ಮಠವು ಕಂಗೊಳಿಸುವುದು. ಪ್ರಕೃತಿಯ ಶಾಂತ ವಾತಾವರಣದಲ್ಲಿ ಮೆರೆವ ಈ ಕ್ಷೇತ್ರವು ಗುರುದೇವ ರವೀಂದ್ರನಾಥ ಠಾ ಕೂ ರರ ಶಾಂತಿನಿಕೇತನವನ್ನು ನೆನಪಿಗೆ ತಂದು ಕೊಡುವುದು. ರೈಲು ನಿಲ್ದಾಣದಿಂದ ಪ್ರವೇಶಿಸುತ್ತಿರುವಾಗಲೇ ಫಲಭರಿತವಾದ ತೋಟಗಳು, ರಮಣೀಯವಾದ ಬೆಟ್ಟಗುಡ್ಡಗಳ ಸಾಲು ಯಾತ್ರಿಕರ ಕಣ್ಮನಗಳಿಗೆ ಒಂದು ದಿವ್ಯವಾದ ವಿನೂತನ ಆನಂದಾನುಭವವನ್ನು ಉಂಟುಮಾಡುವುವು. ಇನ್ನೂ ಮುಂದುವರಿದಂತೆ ಸಿದ್ಧಗಂಗೆ ಜನಿಸಿರುವ ಬೆಟ್ಟದ ದೇವಾಲಯ, ಮಂಟಪಾದಿಗಳು, ಕಳಸಗಳು ಮೆಟ್ಟಲುಗಳು, ವಿವಿಧ ಶಾಲಾ ಕಾಲೇಜುಗಳ ಕಟ್ಟಡಗಳು ಯಾತ್ರಿಕರ ಮ ನ ಸ್ಸ ನ್ನು ಆಕರ್ಷಿಸಿ ಸೂರೆಗೊಳ್ಳುವುವು. ಕ್ಷೇತ್ರಕ್ಕೆ ಸಮೀಪದಲ್ಲಿ ಎ ಡ ಗ ಡೆ ಒಂದು ಕಲ್ಯಾಣಿ ಇದೆ. ಇಲ್ಲಿ ಯಾತ್ರಾರ್ಥಿಗಳು ಸ್ನಾನಮಾಡಿ ಕ್ಷೇತ್ರ ಸಂದರ್ಶನಕ್ಕೆ ಹೊರಡುತ್ತಾರೆ. ಬಲಕ್ಕಿರುವ ಅಡವೀಸ್ವಾಮಿಗಳವರ ಗದ್ದುಗೆಯಿಂದ ಪೂಜಾಕಾಲದ ಘಂಟಾ ನಿನಾದವು ಮೊಳಗಿ ಬರುವುದು. ಸ್ವಲ್ಪ ಮುಂದೆ ಎಡ ಬಲಗಳಲ್ಲಿ ಹಳೆಯ ಮಠದ ಕಟ್ಟಡದ ಕೈಸಾಲೆಗಳು ಕಂಗೊಳಿಸುತ್ತವೆ ಎಡ ಭಾಗದ ಕಲ್ಲಿನ ಕಟ್ಟಡದ ಕೈಸಾಲೆಯಲ್ಲಿ ಮಠಾಧಿಪತಿಗಳಾದ ಪೂಜ್ಯ ಶ್ರೀಗಳವರು ಒಂದು ದೊಡ್ಡ ಎತ್ತರವಾದ ಮಂಚದ ಮೇಲೆ ಮಂಡಿಸಿ ಭಕ್ತಾದಿಗಳಿಗೆ ದರ್ಶನಾಶೀರ್ವಾದಗಳನ್ನು ಅನುಗ್ರಹಿಸುತ್ತಾರೆ. ಕೈಲಾಸವಾಸಿಗಳಾಗಿರುವ ಶ್ರೀ ಅಡವೀ ಸ್ವಾಮಿಗಳ ಹಾಗೂ ಶ್ರೀ ಉದ್ದಾನ ಶಿವಯೋಗಿಗಳ ಮತ್ತು ಈಗಿನ ಶ್ರೀಗಳವರ ಭವ್ಯವಾದ ಭಾವಚಿತ್ರಗಳು ಕೈಸಾಲೆಯಲ್ಲಿ ಕಂಗೊಳಿಸುತ್ತಿವೆ.

ಯಾತ್ರಿಕನು ಹೀಗೆಯೇ ಮಠದ ಒಳಭಾಗಕ್ಕೆ ಹೋದರೆ ಅಲ್ಲಿ ನೋಡುವುದೇನು? ಆಳೆತ್ತರದ ಮಾರು ಮಾರು ಅಗಲದ ದೊಡ್ಡ ದೊಡ್ಡ ತಾಮ್ರದ ಪಾತ್ರೆಗಳು, ರಾಶಿ ರಾಶಿಯಾಗಿ ಒಂದರ ಮೇಲೊಂದರಂತೆ ಏರಿರುವ ಅಕ್ಕಿ ಮುಂತಾದ ಧಾನ್ಯದ ಮೂಟೆಗಳೂ, ನೂರಾರು ಜನ ಒಮ್ಮೆಲೆ ಕುಳಿತು ಊಟ ಮಾಡಬಹುದಾದ ಭೋಜನ ಗೃಹ, ಇಪ್ಪತ್ನಾಲ್ಕು ಗಂಟೆಯೂ ಬೆಂಕಿ ಇದ್ದೇ ಇರುವ ಅಡುಗೆಯ ಒಲೆಗಳೂ, ಊಟ ಮಾಡಲು ಕುಳಿತಿರುವ ಯಾತ್ರಿಕರೂ, ವಿದ್ಯಾರ್ಥಿಗಳೂ, ಬಡಿಸುವ ಜನ, ಎಲೆ ಎತ್ತಿ ಹಾಕುವ ಜನ, ತಿಂದು ತೃಪ್ತಿಯಿಂದ ತೇಗಿ ಹೊರ ಬರುವ ಜನದ ಮುಂದೆ ಆಹಾ ! ಎಂತಹಾ ಅಪೂರ್ವ ಕೌತುಕದ ನೋಟ! ಏನು, ಊಟ ಮಾಡುವವರು ಒಬ್ಬರೆ, ಇಬ್ಬರೆ, ಹತ್ತು ಮಂದಿಯೇ, ಇಪ್ಪತ್ತು ಮಂದಿಯೇ, ನೂರು ಜನವೇ, ಇನ್ನೂರು ಜನವೇ, ಸಾವಿರಾರು ಮಂದಿ !!!. ಜಾತ್ರೆಯ ಕಾಲದಲ್ಲಂತೂ 50-60 ಸಾವಿರ ಜನ.

## ಕ್ಷೇತ್ರ ಧರ್ಮ—ದಯೆ—ಅನ್ನದಾನ

ಸ್ನಾನಾದಿಗಳನ್ನು ಮಾಡಿ ದೇವರಿಗೆ ಹೂವು, ಹಣ್ಣು ಕಾಯಿಗಳನ್ನರ್ಪಿಸಿ ಶ್ರೀ ಶ್ರೀಗಳವರ ದರ್ಶನ ಮಾಡಲು ಬಂದ ಯಾತ್ರಿಕನಿಗೆ ಯೋಗಕ್ಷೇಮವಾದ ನಂತರ ಮೊಟ್ಟ ಮೊದಲು ಶ್ರೀಗಳವರು ಅಪ್ಪಣೆ ಕೊಡಿಸುವ ಮಾತಾವುದು ಗೊತ್ತೆ ? "ಊಟ ಮಾಡಿದಿರಾ ?" ಇಲ್ಲವೆಂದರೆ "ಊಟಮಾಡಿಕೊಂಡು ಹೋಗಿ" ಎನ್ನುವರು. "ಭೂತ ತೃಪ್ತಿಯೇ ಭೂತೇಶನ ತೃಪ್ತಿ" ಎಂಬ ದಿವ್ಯ ತತ್ವದ ಸಂಕೇತವಿದು ಎಂಬುದನ್ನು ಒತ್ತಿ ಹೇಳಬೇಕಾಗಿಲ್ಲವಷ್ಟೆ.

"Him I call Mahathman whose heart bleeds for Poor" ಎಂದೊಮ್ಮೆ ಸ್ವಾಮಿ ವಿವೇಕಾನಂದರು ಹೇಳಿದರು. ಶ್ರೀ ಶ್ರೀ ಗಳವರು ಈ ಮಾತನ್ನು ಪದೇ ಪದೇ ತಮ್ಮ ಭಾಷಣಗಳಲ್ಲಿ ಹೇಳುತ್ತಲೇ ಇರುತ್ತಾರೆ. ಶ್ರೀ ಕ್ಷೇತ್ರವು ಪರಂಪರಾಗತವಾಗಿ ಈ ದೃ ಷ್ಟಿ ಯಿಂ ದ ಲೆ ದಾಸೋಹ ಭಾವದಿಂದ ಅನ್ನದಾನಾದಿಗಳನ್ನು ಮಾಡಿ ದೀನ ದರಿದ್ರರ ಮೇಲ್ಮೆಯನ್ನು ಸಾಧಿಸುತ್ತಿದೆ. —ಸಶೇಷ

卐

OUR

# NEW ENGINEERING COLLEGE

*in*

TUMKUR

by **M. Chickannaiyappa,** B.E., M.S.C.E. (U.S.A.), A.M.I.E.
*Vice Principal*
Sree Siddaganga College of Engineering

Historians have a practice of characterising different ages by the peculiar features of that age. As far as one can see from the trends and developments, the present will be called as an age of Science and Technology. It is only through Science and Technology that we can eliminate poverty in this country.

Having realised the paramount importance of technological education in economic emancipation of our people, it was the long cherished desire of Sree Sree Sivakumara Swamigalu of Siddaganga Mutt to start an Engineering College to train a band of Engineers who could render valuable service for the alround development of the country. But the starting of an Engineering College involed heavy responsibility and enormous expenditure. However the worthy desire of the revered Swamiji got the support of the Philanthropic men of Tumkur, and other places. Liberal donations were given by several institutions and generous public such as G.M. Siddaramanna Charities Trust, G.B. Mallikarjunaiah Charities Trust, Grain Merchants Co-operative Bank and Sriyuths: T. N. Kempahonniah, M. V. Sivappa, A.K.A. Parswanath, M. Mariswamappa and others.

Moved by this spontaneous support Sree Swamiji decided to start the Engineering College from the Academic year 1963—64. Accordingly "Sree Siddaganga Education Society" was formed and registered with the following objects.

a) To promote education and culture by establishing Colleges, Schools and Institutions, Training Centres, Research Centres and Libraries.

b) To establish Hostels and Boarding Homes for the comfort of students and teachers.

c) To print and publish books of literary, cultural, religious and scientific

value and to establish printing press for this object.

d) To arrange for lectures, seminars, symposiums and conferences for promoting education, culture.

e) To provide houses and other amenities to teachers and staff engaged in the objects (a) to (e) above.

(f) To do all other acts which are neccessary or desirable for promoting the objects (a) to (e) above.

A board of management and a governing council were also formed with Sree Sree Sivakumara Swamigalu as the President and benefactor.

With this the "Red letter day" in the history of Tumkur came off on 19—6—1963 when "Sree Siddaganga Engineering College" was inaugurated in Sree Siddaganga High School Buildings. The college is affiliated to the University of Mysore. Well qualified and experienced staff were appointed for several departments. Admissions started pouring in, and the college admitted 120 students from all part of the country.

This was the beginning of a new and vigorous activity of a band of young men (both teaching and other staff) to train the future engineers of the country.

The class work was started in the last week of July and both the students and staff worked hard to maintain good academic standards and to face the University examination of April, 1964. The results of that examination were good with six first classes. This achievement would not have been possible but for the hard and team work of all the staff members.

The first requirement for the college was a good and suitable site. When the management was faced with the difficult problem of getting a good site for the college, Sri M.V. Sivappa, Proprietor, Shankara Saw Mills, graciously donated his land of about 40 acres, on Tumkur—Bangalore Road (near Batavade Village).

Materials started pouring into this site to feed the hunderds of workers engaged in the construction work. Both in the Train and Buses the travelling public were starring the brisk work in the college site.

Within one year after getting the site several buildings have come up. Huge boxes started moving into the site every day carrying the equipment to fill the above buildings. A few machines have already been errected and the rest well go to their places soon.

The college will move to the new buildings by next June, and then onwards the several activities will be further accelerated.

Thanks for the benevelance of Sree Sree Sivakumara Swamigalu of Sree Siddaganga Mutt and the generous public, whose efforts have been added another landmark to the educational centre of Tumkur.




## ಮೈಸೂರಿನಲ್ಲಿ ಘಟಿಕೋತ್ಸವ

ಮೈಸೂರಿನಲ್ಲಿ 1964 ನೆಯ ಡಿಸೆಂಬರ್ ಐದನೆಯ ದಿನಾಂಕ ಮೈಸೂರು ವಿಶ್ವವಿದ್ಯಾನಿಲಯದ ಘಟಿಕೋತ್ಸವ ಎಂದಿನಂತೆಯೇ ಬಹು ವೈಭವದಿಂದ ನೆರವೇರಿತು. ಮಾಜಿ ರಾಜ್ಯಪಾಲ ಶ್ರೀ ಪ್ರಕಾಶರು ಈ ಘಟಿಕೋತ್ಸವದ ಪದವೀ ದಾನದ ಸಮಾರಂಭದಲ್ಲಿ ವಿಚಾರಪೂರಿತವಾಗಿ ಪದವೀಧರರನ್ನು ಕುರಿತು ಭಾಷಣ ಮಾಡಿದರು.

ಶ್ರೀಯುತರು ತಮ್ಮ ಭಾಷಣದಲ್ಲಿ ನೂತನ ಪದವೀಧರರು ಅವಶ್ಯಕವಾಗಿ ಹೊರಲೇಬೇಕಾದ ಕರ್ತವ್ಯದ ಭಾರವಾವುದೆಂಬುದನ್ನು ಒತ್ತಿ ಹೇಳಿದರು.

### ಕರ್ತವ್ಯ ನಿರ್ವಹಣೆಯಲ್ಲಿ ಇತರರಿಗೆ ಮಾರ್ಗದರ್ಶಕರಾಗಿ ಬಾಳಿ

ಶ್ರೀ ಪ್ರಕಾಶರು ತಮ್ಮ ಭಾಷಣವನ್ನು ಮುಂದುವರಿಸುತ್ತಾ, ಪದವೀಧರರು ತಮ್ಮ ಕರ್ತವ್ಯ ನಿರ್ವಹಣೆಯಲ್ಲಿ ಇತರರಿಗೆ ಮಾರ್ಗದರ್ಶಕರಾಗಿ ಬಾಳಬೇಕೆಂದು ಒತ್ತಿ ಹೇಳಿದರು. ಕೇವಲ ಕೆಲವೇ ಬಗೆಯ ಉದ್ಯೋಗಗಳಿಗೆ ಸರಿಹೊಂದಬಲ್ಲ ಶಿಕ್ಷಣವನ್ನು ಎಲ್ಲರಿಗೂ ನೀಡುತ್ತಿರುವುದರ ಕಾರಣದಿಂದ ಭಾರತದ ಬಹುಮಂದಿ ಪದವೀಧರ ತರುಣರು ಬಾಳಿನಲ್ಲಿ ಅಸುಖಿಗಳಾಗಿರುವರು. ನಿರಾಶೆ, ಬೇಸರಗಳು ಅವರಲ್ಲಿ ಬೇರೂರಿವೆ. ಕೆಲವು ಉದ್ಯೋಗಗಳು ಮಾತ್ರ ಗೌರವ ಘನತೆಗಳುಳ್ಳವೆಂದೂ ಉಳಿದವು ಕೀಳುದರ್ಜೆಯ ಉದ್ಯೋಗಗಳೆಂದೂ ನಾವು ಭಾವಿಸಿದ್ದೇವೆ. ಇದರಿಂದ ಹಲವು "ಕೋರ್ಸ್" ಗಳಿಗೆ ಹೆಚ್ಚಿನ ಬೇಡಿಕೆ ದೊರೆಯುವಂತಾಗಿದೆ. ಶ್ರೀ ಪ್ರಕಾಶರು ನಾವು ಹೊಸ ಜೀವನ ಮಾರ್ಗಗಳನ್ನು ಹುಡುಕಿಲ್ಲವೆಂಬುದರ ಕಡೆಗೂ ಮತ್ತು ಶಿಕ್ಷಣವನ್ನು ಅಗತ್ಯಕ್ಕೆ ತಕ್ಕಂತೆ ಅಳವಡಿಸಿಕೊಂಡಿಲ್ಲವೆಂಬುದರ ಕಡೆಗೂ ನಮ್ಮ ಗಮನವನ್ನು ಸೆಳೆದಿರುವುದು, ಸ್ತುತ್ಯವಾದುದಾಗಿದೆ. ಅವರ ಈ ನುಡಿ ಸ್ವಾಗತಾರ್ಹ.

## ಅಕ್ಷರಸ್ಥನಾದ ಮಾತ್ರಕ್ಕೆ ಸುಶಿಕ್ಷಿತನಾಗಲಾರ

ಅಕ್ಷರಸ್ಥನಾದ ಮಾತ್ರಕ್ಕೆ ಒಬ್ಬ ವ್ಯಕ್ತಿ ವಿದ್ಯಾವಂತನಾಗುವುದಿಲ್ಲವೆಂದು ಶ್ರೀಯುತರು ಹೇಳಿರುವುದು ಸತ್ಯಸ್ಯಸತ್ಯ. ಅನಕ್ಷರಸ್ಥನೂ ಸುಶಿಕ್ಷಿತನಾಗಿರಬಹುದು. ಸಾಕ್ಷರತೆಯಿಂದ ಶಿಕ್ಷಣದ ಪ್ರೌಢ್ಯ ಹೆಚ್ಚುವುದು. ಹಾಗೂ ವಿದ್ಯೆಯನ್ನು ಅದು ಪರಿಪೂರ್ಣಗೊಳಿಸುವುದು. ಶ್ರೀಯುವರು ಮುಂದುವರೆದು "ಕಾಶ್ಮೀರದ ಶಾಲುಗಳನ್ನೂ ಮತ್ತು ವಾರಣಾಸಿಯ ರೇಷ್ಮೆಯ ದುಕೂಲಗಳನ್ನೂ ನೇಯುವ ಕಲಾವಿದರಲ್ಲಿ ಬಹುಮಂದಿ ನಿರಕ್ಷರಕುಕ್ಷಿಗಳೇ ಆಗಿದ್ದಾರೆ. ಆದರೆ ಅವರು ತೋರಿಸುವ ಕಲೆಗಾರಿಕೆ ಮಾತ್ರ ಜಗತ್ ಪ್ರಸಿದ್ಧವಾಗಿವೆ. ಅವನ್ನು ನಾವು ಗಮನದಲ್ಲಿಟ್ಟುಕೊಂಡಿರಬೇಕು. ವಿದ್ಯಾವಂತರೆನಿಸಿಕೊಂಡವರು ಇಂತಹ ನಿರಕ್ಷರಸ್ಥ ಕಲಾವಿದರನ್ನು ಗೌರವಿಸುವುದನ್ನು ಮೊದಲು ಕಲಿಯಬೇಕು" ಎಂದರು. ಇಂದು ನಮ್ಮ ದೇಶಕ್ಕೆ ಇಂತಹ ವಿಚಾರಸರಣಿ ಅತ್ಯಮೂಲ್ಯವೂ ಅತ್ಯಗತ್ಯವೂ ಆಗಿದೆಯೆಂಬುದನ್ನೂ ಎಷ್ಟು ಒತ್ತಿ ಹೇಳಿದರೂ ಸಾಲದು.

## ಧರ್ಮಸ್ಥಳದಲ್ಲಿ ಸರ್ವಧರ್ಮ ಸಮ್ಮೇಳನ

ದಿನಾಂಕ ೨-೧೨-೧೯೬೪ ರಂದು ಧರ್ಮಸ್ಥಳದಲ್ಲಿ ಸರ್ವಧರ್ಮ ಸಮ್ಮೇಳನವು ಸಮಾವೇಶಗೊಂಡಿತ್ತು. ಶ್ರೀ ಜಗದ್ಗುರು ಚೆನ್ನಬಸವ ದೇಶಿಕೇಂದ್ರ ಶಿವಾಚಾರ್ಯ ಸ್ವಾಮಿಗಳವರು (ಶ್ರೀ ಜ ಚ ನಿ.ರವರು) ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದರು. ಧರ್ಮಾತ್ಮರೂ, ಅನುಭವಿಗಳೂ, ಕಾವ್ಯ ಸಾಹಿತ್ಯರಸಜ್ಞರೂ, ಕವಿಗಳೂ, ಉತ್ತಮ ವಾಙ್ಮಿಗಳೂ ಆದ ಶ್ರೀಗಳವರು ಈ ಸಮಾರಂಭದ ಅಧ್ಯಕ್ಷರಾದುದು ಧರ್ಮಾಭಿಮಾನಿಗಳಿಗೆಲ್ಲಾ ದೊಡ್ಡ ಹೆಮ್ಮೆಯ ಸಂತಸದ ಸಂಗತಿಯೇ ಸರಿ.

**ಸರ್ವಧರ್ಮದ ಸಮನ್ವಯವೆ ಸರ್ವೋದಯದ ಅಡಿಗಲ್ಲು**

ಶ್ರೀಗಳವರು ತಮ್ಮ ಭಾಷಣದಲ್ಲಿ "ಸರ್ವಧರ್ಮ ಸಮನ್ವಯವು ಸರ್ವೋದಯದ ಅಡಿಗಲ್ಲೆಂದು" ಅಪ್ಪಣೆ ಕೊಡಿಸಿದರು.

ಮಾನವ ಸಮಾಜವೆಂಬ ಮರಕ್ಕೆ
ಮತಧರ್ಮಂಗಳೇ ರೆಂಬೆಗಳು ನೋಡಾ
ಅವರೆಂಬೆಯಾದೊಡೇನು ?
ಮೂಲವೊಂದೇ ಫಲವೊಂದೇ !
ಮೇಲು ಕೀಳೆಂಬ ಮರುಳರನೇನೆಂಬೆ
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ
ಸಿಂಹಾಸನಾಧೀಶ್ವರಾ ?

ಎಂದು ಮತಧರ್ಮಗಳಲ್ಲಿ ಮೇಲುಕೀಳಿಲ್ಲವೆಂದು ಒತ್ತಿ ಹೇಳಿದರು.

**ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋಭಯಾವಹಃ**

"ಸ್ವಧರ್ಮವೆಂದರೆ ಆತ್ಮ ಧರ್ಮ. ಪರಧರ್ಮವೆಂದರೆ ಆತ್ಮನಿಗೆ ಅನ್ಯವಾದ ದೇಹೇಂದ್ರಿಯಗಳ ಧರ್ಮ. ಆತ್ಮ ಧರ್ಮದಲ್ಲಿದ್ದು ಸತ್ತರೂ ಲೇಸು. ಆ ಸಾವು ಬೇರೆ, ದೇಹ ಧರ್ಮಗಳು ಸಾಯಬಹುದು. ಆತ್ಮಧರ್ಮಗಳು ಸಾಯವು. ...............ಧರ್ಮಜ್ಯೋತಿಗೆ ಜಾತಿಭೂತ ಹಿಡಿಯಬಾರದು. ಕೋಮುವಾರುಕೀಟ ಬಳಸಬಾರದು .......**ಪ್ರತಿ ಸಮಾಜವು ಮತೀಯ ಧರ್ಮದಿಂದ ಮಾನವ ಧರ್ಮಕ್ಕೆ, ಪ್ರತಿ ಮಾನವನು ವ್ಯಕ್ತಿಧರ್ಮದಿಂದ ವಿಶ್ವಧರ್ಮಕ್ಕೆ** ಏರಿ ನಿಲ್ಲಬೇಕಾಗಿದೆ."— ಈ ಮಾತುಗಳು ವಿಶ್ವಧರ್ಮದ ಸ್ವರೂಪ ದರ್ಶನವನ್ನು ಮಾಡಿಸಬಲ್ಲವು. ನನ್ನ ಧರ್ಮ ಸರಿಯೆಂಬ ಭಿನ್ನಾಭಿಪ್ರಾಯ ತೊಲಗಿ ಅಂತಃಕಲಹವಳಿದು, ಜನತೆ ಧರ್ಮ ವಿಧರ್ಮಗಳ ಕಚ್ಚಾಟ ಹುಚ್ಚಾಟದಿಂದ ಪಾರಾಗಿ ನಿಜವಾಗಿ ಪ್ರಗತಿಗೆ ಕಾಲಿಡಬೇಕಾದರೆ ಈ ವಿಶ್ವಧರ್ಮದ ಜ್ಯೋತಿಯೊಂದೇ ನಮಗೆ ಶರಣೆಂಬುದನ್ನು ನಾವು ಮರೆತರೆ ನಾವು ಕರ್ತವ್ಯ ಭ್ರಷ್ಟರಾದಂತೆಯೇ ಸರಿ.

"ಸರ್ವಧರ್ಮ ಸಮನ್ವಯ ಬರಿ ಮಾತಿನಲ್ಲಿ ಆಗದು. ಮಾಡುವಿಕೆಯಲ್ಲಿ ಮುಂದುವರಿಯಬೇಕು." ಈ ಮಾತನ್ನು ನಾನು ಮನದುಂಬಿ ಸ್ವಾಗತಿಸುತ್ತೇನೆ.

**ಆಹಾರದ ಕೊರತೆ! ಬೆಲೆ ಏರಿಕೆ!**

'ಸುಜಲಾಂ ಸುಫಲಾಂ ಮಲಯಜ ಶೀತಲಾಂ ಸಸ್ಯ ಶ್ಯಾಮಲಾಂ ಮಾತರಂ ವಂದೇ' ಎಂದು ಭಾರತೀಯರು ಪ್ರೇಮರೆತು ಹಾಡುವುದುಂಟು. ನಿಜ. ಭಾರತಾಂಬೆ ಇಂಥ ಸ್ತೋತ್ರಕ್ಕೆ ಎಷ್ಟುಮಟ್ಟಿಗೆ ಪಾತ್ರಳೆಂಬುದನ್ನು ಇಂದಿನ ಮಿತಿಮೀರಿದ ಆಹಾರ ಧಾರಣೆವಾಸಿಗಳ ಹಿನ್ನೆಲೆಯಲ್ಲಿ ಹೇಗೆ ನಿರ್ಧರಿಸಬೇಕು ? ಶಾಂತಿ ಸುಭಿಕ್ಷಗಳ ತೌರೂರಾಗಿದ್ದ ಭಾರತದಲ್ಲಿ ಈ ಪ್ರಕ್ಷುಬ್ಧ ಪರಿಸ್ಥಿತಿಗೆ ಕಾರಣವಾದರೂ ಏನು ? ಇದು ಸಾಮಾನ್ಯ ಪ್ರಜೆಯಿಂದ ಹಿಡಿದು ಭಾರತದ ರಾಷ್ಟ್ರಾಧ್ಯಕ್ಷರವರೆಗೂ ಬಿಡಿಸಲಾರದ ಸಮಸ್ಯೆಯಾಗಿರುವುದಲ್ಲಾ ! ನಮ್ಮ ರಾಷ್ಟ್ರಾಧ್ಯಕ್ಷರೇ ಹೇಳಿರುವರು ಈ ಮಾತುಗಳನ್ನು ನೋಡಿ :—

"How is it that the United States and that the Soviet Union with only 10 and 30 Percent of their population respectively engaged in agriculture can feed their people and also export while we with nearly 75 Percent of our population engaged in agriculture still have to import food grains."

ನಿಜ. ಅಮೇರಿಕದ ಸಂಯುಕ್ತ ಸಂಸ್ಥಾನದ ಜನತೆಯಲ್ಲಿ ಕೇವಲ ಶೇಕಡ ಹತ್ತರಷ್ಟು ಜನ ಹಾಗೂ ಸೋವಿಯತ್ ಜನ ಸಂಖ್ಯೆಯ ಶೇಕಡ ಮೂವತ್ತರಷ್ಟು ಜನ ಕೃಷಿಕರಾಗಿ ತಮ್ಮ ನಾಡಿನವರಿಗೂ ಉಣಬಡಿಸಿ ಪರದೇಶದವರಿಗೂ ಆಹಾರವನ್ನು ರಫ್ತು ಮಾಡುತ್ತಾರೆ. ಆದರೆ ನಮ್ಮ ನಾಡಿನ ಜನಸಂಖ್ಯೆಯ ಶೇಕಡ ಎಪ್ಪತ್ತೈದರಷ್ಟು ಜನ ಬೇಸಾಯಗಾರರೇ ಆಗಿದ್ದರೂ ನಾವು ಆಹಾರಕ್ಕಾಗಿ ಪರಕೀಯರನ್ನು ಕೈಯೊಡ್ಡಿ ಬೇಡುತ್ತಿದ್ದೇವೆ. ಈ ಮಾತುಗಳು ನಾವು ಆಹಾರದ ಕೊರತೆಯನ್ನು ನೀಗುವುದರ ಕಡೆಗೆ ಆದ್ಯ ಗಮನವನ್ನು ಕೊಡಬೇಕೆಂಬುದರ ಕಡೆಗೆ ನಮ್ಮ ಸಂಪೂರ್ಣ ಲಕ್ಷ್ಯವನ್ನು ಸೆಳೆಯುತ್ತವೆಯಲ್ಲದೆ ಅನ್ಯಥಾ ಅಲ್ಲ.

ನಮ್ಮ ಸರ್ಕಾರಕ್ಕೆ Welfare State (ಸುಖೀರಾಜ್ಯ) ಕಲ್ಪನೆ ಕೇವಲ ಕಲ್ಪನೆಯಾಗಿಯೇ ಉಳಿಯಬಾರದು. ಆಡಳಿತದ ವೆಚ್ಚ ಹೆಚ್ಚಿರುವುದೂ, ಸರಕಾರದ ಹಾಗೂ ಸಾರ್ವಜನಿಕ ಉದ್ಯಮಗಳಲ್ಲಿ ಲಾಭ ಮಾಡಬೇಕೆಂಬ ಆಶೆ ಹೆಚ್ಚಿರುವುದೂ ಬಹುಮಟ್ಟಿಗೆ ಭಾರಿ ಬೆಲೆಗಳ ಏರಿಕೆಗೆ ಕಾರಣವಾಗಿದೆ. ನಮ್ಮ ಯೋಜನೆಗಳು ಕಾರ್ಯಗತವಾಗುವುದರಲ್ಲಿ ಪ್ರಾಮಾಣಿಕತೆ, ದಕ್ಷತೆ, ಶ್ರಮಸಹಿಷ್ಣುತೆ, ಅತ್ಯಗತ್ಯವೆಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಭಾರತಾಂಬೆ ಸುಜಲೆ, ಸುಫಲೆ, ಸಸ್ಯ ಶ್ಯಾಮಲೆ'ಯಾಗಿ ಶಾಂತಿ ಶುಭಾಕ್ಷತೆಯ ತವರಾಗಿ ಮೆರೆಯುವಂತಾಗಬೇಕಾದರೆ ಆಡಳಿತ ವ್ಯವಸ್ಥೆಯಲ್ಲಿ ಈ ಗುಣಗಳೇ ಏಕೈಕ ಪರಿಹಾರ ಮಾರ್ಗ.

